# ಕರ್ಮವೀರ



ಸಂಪಾದಕರು:
ಹ. ರಾ. ಪುರೋಹಿತ, ಎಂ. ಎ.

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

Editor,
H. R. PUROHIT, M. A.

— [ ಸಂಪುಟ ೧೯ ] — ಹುಬ್ಬಳ್ಳಿ ಸೋಮವಾರ ತಾರೀಖು ೧—೩—೧೯೪೮ — [ ಸಂಚಿಕೆ ೪೪ ] —

# ಸಂಯುಕ್ತ ರಾಷ್ಟ್ರಸಂಘಕ್ಕೆ ಅವಸಾನ ಸಮೀಪಿಸಿತೆ?

## ಪ್ರತಿಷೇಧಾಧಿಕಾರದ ವಿಘ್ನ-ಅಮೇರಿಕ-ರಶಿಯಗಳ ದ್ವಂದ್ವ-ಬಂಡವಾಲ ಮತ್ತು ಮಾರ್ಕ್ಸ್ ಪದ್ಧತಿಗಳ ಸೋಲು - ಹೊಸ ಯೋಜನೆ —

ಮಾರ್ಕ್ಸನ ಸಾಮ್ಯವಾದದಲ್ಲಿ ಜೀವನವು ಯಾಂತ್ರಿಕವಾಗುವುದೆಂದೂ ಬಂಡವಾಲಶಾಹಿಯಲ್ಲಿ ಸಿರಿಯಣ್ಣ ಬರಿಯಣ್ಣರ ವರ್ಗಗಳೆರಡುಂಟಾಗಿ ಬಹುಜನರು ನರಕಭಾಜನರಾಗುವರೆಂದೂ ಪ್ರತೀತಿಯಿರುವುದರಿಂದ ಇವೆರಡನ್ನುಳಿದು ಮೂರನೆಯದಾದ ಗ್ರಾಹಕ ಸಹಕಾರ ಪದ್ಧತಿಯೆಂಬ ಹೊಸ ಯೋಜನೆಯ ಆಧಾರದ ಮೇಲೆ ರಾಷ್ಟ್ರ ರಚನೆಯಾಗಬೇಕೆಂದೂ ರಾಷ್ಟ್ರಗಳು ಸೈನ್ಯ ಮತ್ತು ನ್ಯಾಯ ವಿಷಯಗಳಲ್ಲಿ ತಮ್ಮ ಸಾರ್ವಭೌಮತ್ವವನ್ನು ಅಂತರ್ರಾಷ್ಟ್ರೀಯವಾದ ಒಂದು ಸಂಘಕ್ಕೆ ಬಿಟ್ಟುಕೊಡಬೇಕೆಂದೂ "ಸ್ಟೇಟ್ಸಮನ್" ಪತ್ರಿಕೆಯ ಹಿಂದಿನ ಸಂಪಾದಕರಾದ ಶ್ರೀ ಆರ್ಥರ್ ಮೂರರು ಅಭಿಪ್ರಾಯಪಡುವುದು ವಿಚಾರಣೀಯವಾಗಿದೆ.

ಹೊಸದಿಲ್ಲಿಯಲ್ಲಿರುವ Indian Council of world Affairs ಭಾರತದ ಜಾಗತಿಕ ಪ್ರಮೇಯ ವಿಚಾರಣಾ ಮಂಡಲದ ಸಭೆಯಲ್ಲಿ ಮಾತನಾಡುತ್ತ ಮೊನ್ನೆ ಸುಪ್ರಸಿದ್ಧ ಬರಹಗಾರರಾದ ಶ್ರೀ ಆರ್ಥರ್ ಮೂರರು— ನಿಜವಾದ ಅಂತರ್ರಾಷ್ಟ್ರೀಯ ಸಶಸ್ತ್ರ ಸೈನ್ಯವಿಲ್ಲದಿದ್ದರೆ ಮತ್ತು ಈಗ ಮಹಾಪ್ರಭುತ್ವಗಳು ತಮ್ಮ ತಮ್ಮ ಸುರಕ್ಷಿತತೆಗಾಗಿ ತಮಗೆ ಬೇಕೆನ್ನುತ್ತಿರುವ ಭೂಗೋಲದ ಸುತ್ತಲಿನ ಠಾಣ್ಯಗಳನ್ನು ವಶದಲ್ಲಿಟ್ಟುಕೊಳ್ಳದಿದ್ದರೆ ಯಾವ ಜಾಗತಿಕ ಸಂಘವೂ ಪರಿಣಾಮಕರವಾಗಿ ಕೆಲಸ ಮಾಡಲಾರದು; ನಿಜವಾದ ವಿಶ್ವಬಲವೊಂದಿದ್ದಾಗ ರಾಷ್ಟ್ರೀಯ ಸರಕಾರಗಳು ಆಂತರಿಕ ಸುರಕ್ಷಿತತೆಯನ್ನು ಕಾಯ್ದುಕೊಳ್ಳಲು ಬೇಕಾದಷ್ಟು ಮಿತಪ್ರಮಾಣದ ಸಶಸ್ತ್ರ ಸೈನ್ಯವನ್ನು ಮಾತ್ರ ಇಟ್ಟುಕೊಳ್ಳುವಂತೆ ಮಾಡಬೇಕು. ಅಂತರ್ರಾಷ್ಟ್ರೀಯ ನ್ಯಾಯಾಲಯದ ಆಜ್ಞೆಗಳನ್ನು ಮಹಾಮಾಂಡಲಿಕ ಬಲವು ಅಮಲಿನಲ್ಲಿ ತರುವಂತಾಗಬೇಕು- ಎಂದು ಹೇಳಿದ್ದು ಮನನೀಯವಾಗಿದೆ. ಅವರ ವಿಚಾರ ಸರಣಿಯು ಮುನ್ನಡೆ ಹೀಗಿದೆ:—

### ಪ್ರತಿಷೇಧಾಧಿಕಾರವಿಲ್ಲದ ಹೊಸ ಸಂಘಟನೆ

'ಸಂ. ರಾ. ಸಂಘದ ತಾಮ್ರಪಟವನ್ನು ಮೇಲೆ ಹೇಳಿದಂತೆ ತಿದ್ದಲಾರರೆಂದು ನಂಬಿಗೆ. ಇಷ್ಟರ ಮೇಲೆ ಪ್ರತಿಷೇಧಾಧಿಕಾರವನ್ನು ಪುನಃ ಪುನಃ ಪ್ರಯೋಗಿಸುತ್ತ ಹೋಗುವದರಿಂದ ಉಂಟಾಗುವ ತೊಂದರೆಯಿಂದ ಸಂಘವು ಒಡೆದು ಹೋಗುವಂತೆ ತೋರುತ್ತದೆ. ಬಹುಶಃ ಪ್ರತಿಷೇಧಾಧಿಕಾರವಿಲ್ಲದ ಹೊಸ ಸಂಘಟನೆಯೊಂದು ರಚಿತವಾಗಬಹುದು. ರಶಿಯವನ್ನು ಅದರಲ್ಲಿ ಸೇರಲು ನಿಯಂತ್ರಿಸಬಹುದು. ಈಗ ಅದು ಸಾರ್ವಭೌಮತ್ವವನ್ನು ರಾಷ್ಟ್ರೀಯ ಸರಕಾರಗಳು ಅಂತರ್ರಾಷ್ಟ್ರೀಯ ಸಂಘಕ್ಕೆ ಬಿಟ್ಟುಕೊಡುವುದಕ್ಕೆ ವಿರುದ್ಧವಿದ್ದರೂ ಅಂತಹ ಸಂಘವೇ ಒಡೆದು ಹೋಗುವ ಪ್ರಸಂಗದಲ್ಲಿ ಏನು ಮಾಡೀತೆಂದು ಹೇಳುವುದು ಸುಲಭವಲ್ಲ. ಇಂಥ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಪರಮಾಣು ಯುದ್ಧ ಕ್ರಮ ನಿಂತಿದೆ. ಪರಮಾಣುಶಕ್ತಿ ಪರಿಶೀಲನ ಸಂಘದ ಸೂಚನೆಗಳಿಗೆ ರಶಿಯ ತೋರಿದ ಪ್ರತಿಭಟನೆ ಮತ್ತು ಅಮೇರಿಕ ಸದ್ಯ: ಯಾವ ರಾಷ್ಟ್ರದಲ್ಲೂ ಇರದಷ್ಟು ಅಣುಬಾಂಬುಗಳನ್ನು ತಯಾರಿಸಿ ಇಟ್ಟುಕೊಂಡಿದ್ದರೂ ಈ ಸ್ಥಿತಿ ಬಹಳ ಕಾಲ ಹಾಗೆ ಇರಲಾರದೆಂಬ ಜನಪ್ರತೀತಿ -ಇವು ಎಷ್ಟು ಸ್ಫೋಟಕ ಪರಿಸ್ಥಿತಿಯನ್ನು ತರಬಹುದೆಂಬುದು ಸ್ಪಷ್ಟವಿದೆ.

### ಅಂತರ್ರಾಷ್ಟ್ರೀಯ ಬಲ ಬೇಡ

ಭದ್ರತಾ ಮಂಡಲವು ಸಶಸ್ತ್ರ ದಳಗಳನ್ನು ಬಳಸಲು ತಕ್ಕ ಯೋಜನೆಯನ್ನು ತಯಾರಿಸಲು ಸ್ಥಾಪಿತವಾದ ಮಿಲಿಟರಿ ಅಧಿಕಾರಿ ಮಂಡಲವು ದಲಗಳು ಸತತ ನೀತಿನಿಷ್ಠವಾದ ನಡೆಗೆ ಹೊಣೆಯಾಗಿರಬೇಕು ಮತ್ತು ಅವುಗಳ ಮೇಲೆ ಅಧಿಕಾರ ನಡೆಸುವ ಪ್ರಕ್ರಿಯೆಯನ್ನು ಇತ್ಯರ್ಥ ಪಡಿಸಬೇಕು ಎಂದು ತಾಮ್ರಪಟದಲ್ಲಿ ಹೇಳಿದೆ. ಆದರೆ ಆ ಮಿಲಿಟರಿ ಅಧಿಕಾರಿ ಮಂಡಲವು ಸಂಪೂರ್ಣವಾಗಿ ಅಪೂರ್ಣವಿರುವ ಒಂದು ವರದಿಯನ್ನು ಮಾಡಿದ್ದಷ್ಟೇ ಇಂದಿನ ವರೆಗೆ ಆದ ಕೆಲಸ.

ಬಿಕ್ಕಟ್ಟಿನ ಪರಿಸ್ಥಿತಿ ಬಂದಾಗ ಮಾತ್ರ "ಅನಿರ್ದಿಷ್ಟ ವೇಳೆ"ಯಲ್ಲಿ ರಾಷ್ಟ್ರಗಳಿಂದ ನಿರ್ದಿಷ್ಟ ಕೈಪಿಡಿಯ ದಲಗಳನ್ನು ತರಿಸುವ ಪದ್ಧತಿಯ ತತ್ವವೊಂದನ್ನು ಅದು ಸ್ವೀಕರಿಸಿತು. ರಾಷ್ಟ್ರಗಳು ತಮ್ಮ ಪಾಲಿನ ಸೈನ್ಯವನ್ನು ಕಳುಹಿಸಿಲ್ಲವಾಗಿ ಭದ್ರತಾ ಮಂಡಲಕ್ಕೆಂದು ಸೈನ್ಯಬಲವಿಲ್ಲದಂತಾಗಿದೆ. ಹಾಗೆ ಸೈನ್ಯಬಲವೊಂದು ಅದಕ್ಕಿದ್ದಿದ್ದರೆ ಮಹಾ ಪ್ರಭುತ್ವ ಪಂಚಕದಲ್ಲಿ ಯಾವ ಒಂದನ್ನಾಗಲಿ ಅದು ತನಗೆ ಬೇಕಾದಂತೆ ನಡೆವ ಹಾಗೆ ಮಾಡಬಹುದಾಗಿತ್ತು.

ಹೇಗೆ ನೋಡಿದರೂ ಆಧುನಿಕ ಯುದ್ಧೋಪಕರಣಗಳಿಲ್ಲದ ಒಂದು ಚಿಕ್ಕ ಪ್ರಭುತ್ವದ ಮೇಲೆ ಬಲಾತ್ಕಾರ ನಡೆಸಬಹುದಲ್ಲದೆ ರಾಷ್ಟ್ರೀಯ ದಲಗಳು ಯಾವ ಒಂದು ಪ್ರಬಲ ಪ್ರಭುತ್ವವನ್ನೂ ವಿಧೇಯನಾಗಿ ಇಡಲಾರವೆಂಬುದು ಸ್ಪಷ್ಟವಿದೆ. ಇದಕ್ಕಿರುವ ವಿಕಲ್ಪವೆಂದರೆ ಒಂದು ಸಂಘಟಿತ ಪದ್ಧತಿ— ಅದರ ಪ್ರಕಾರ ನೇರವಾಗಿ ಜಾಗತಿಕ ಪೋಲೀಸು ದಲವನ್ನು ರಚಿಸಿ ಒಂದು ಜಾಗತಿಕ ಅಧಿಕಾರಕ್ಕೆ ಜಗತ್ತಿನ ಎಲ್ಲ ವಿಧದ ಮಹತ್ತರವಾದ ಶಸ್ತ್ರಾಸ್ತ್ರಗಳನ್ನೂ ಒಪ್ಪಿಸಿಬಿಡುವುದು.

### ಪರಮಾಣು ಬಾಂಬುಗಳ ಮಹತ್ವವಿಲ್ಲ

ಇದರ ಮೇಲೆ ಮಿಲಿಟರಿ ಅಧಿಕಾರಿ ಮಂಡಲವು ಪರಮಾಣು ಶಸ್ತ್ರಗಳ ಮತ್ತು ಪರಮಾಣುಶಕ್ತಿ ಪ್ರಧಾನರ ರಾಕೆಟ್ಸ್ ಇಲ್ಲವೆ ಕ್ರಿಮಿ ಪ್ರಯೋಗದ ಅಥವಾ ಜೀವ-ರಾಸಾಯನಿಕ ಶಾಸ್ತ್ರೀಯ ಯುದ್ಧ ಇವುಗಳ ಪಾತ್ರದ ಬಗ್ಗೆ ಏನನ್ನೂ ಹೇಳಿಲ್ಲ. ಯುದ್ಧವನ್ನು ನಿಲ್ಲಿಸಬೇಕಾದರೆ ಅಂತಹ ಆಯುಧಗಳು ಅಂತರ್‌ರಾಷ್ಟ್ರೀಯ ಸಂಘದ ವಶದಲ್ಲಲ್ಲದೆ ವೈಯಕ್ತಿಕ ರಾಷ್ಟ್ರಗಳ ವಶದಲ್ಲಿರದಂತೆ ನೋಡಿಕೊಳ್ಳಬೇಕು.

ಯುದ್ಧದ ಖರ್ಚು ವರದಿಯಲ್ಲಿ ಮೊದಲೇ ಅಲಕ್ಷಿತ ವಸ್ತುವಾಗಿತ್ತು. ಹಿಂದಿನ ಕ್ರಮಕ್ಕಿಂತ ಪರಮಾಣು ಸಮರ ಪದ್ಧತಿಯು ಆಕ್ರಾಮಕನಿಗೆ ಕಡಿಮೆ ಖರ್ಚಿನಲ್ಲಿ ಕಾರ್ಯವನ್ನು ಸಾಧಿಸಿಕೊಡುತ್ತದೆ. ಇಂದು ಪರಮಾಣು ಬಾಂಬೊಂದರ ಬೆಲೆ ೧೦ ಲಕ್ಷ ಡಾಲರೆಂದು ಹೇಳಲಾಗುತ್ತದೆ; ಇದು ೩ "ಹಾರುವ ಕೋಟೆ" (ಬಾಂಬುಹಾಕುವ ವಿಮಾನ) ಗಳ ಬೆಲೆಗಿಂತ ಕಡಿಮೆಯಾಗಿದೆ. ಇದಲ್ಲದೆ ಈ ಬಾಂಬರುಗಳನ್ನು ಅಟಂ ಬಾಂಬಿನೊಡನೆ ಹೋಲಿಸಿದರೆ ಹುಡುಗನೊಬ್ಬನ ಗಾಳಿಗೋವಿ (Air Gun) ಯೊಳಗಿನ ಗೋಲಿಗಳನ್ನು ನಾವಿಕನ ೧೬ ಅಂಗಲದ ತೋಪಿಯ ಭೀಮಗುಂಡಿನೊಡನೆ ಹೋಲಿಸಿದಂತೆಯೇ ಸರಿ.

ಪೋಲಿಸದಲ್ಲದೆ ಇನ್ನೂ ಒಂದು ವಿಧದ ಬದಲಾವಣೆ ಸಂಭವಿಸಬಹುದು. ಅಮೇರಿಕ ತನ್ನ ಇಂದಿನ ಪರಮಾಣು ಬಲದಿಂದ ರಶಿಯವನ್ನು ಸಹಕರಿಸಲು ಒತ್ತಾಯಪಡಿಸುವುದಲ್ಲದೆ, ಅದರ ನಿರೀಕ್ಷೆಯಂತೆ ತನ್ನ ಅರ್ಥವಿತರಣವನ್ನು ಪೂರಯಿಸಿದರೂ ಖಾಸಗಿ ಉದ್ದಿಮೆಗಳ ಮೇಲಿನ ಅತಿ ಮೋಹದ ಮೂಲಕ ರಶಿಯಕ್ಕಿಲ್ಲದ ಅಜಸ್ರವಾದ ಸಂಪಿನ ಜ್ವರ ಅದಕ್ಕೆ ಹಿಡಿದು ಅದರ ಅರ್ಥ ವಿತರಣದಲ್ಲಿ ಬಿಕ್ಕಟ್ಟುಂಟಾಗಬಹುದು. ಇದು ನಿಜವಾದ ಮಹಾ ಮಾಂಡಲಿಕ ಸಂಘಟನಕ್ಕೆ ಸಾಧಕವೆನಿಸೀತಲ್ಲದೆ ಯಾವುದಾದರೊಂದು ಪ್ರಭುತ್ವದ ಸರ್ವಾಧಿಕಾರಿತ್ವಕ್ಕೆ ಕಾರಣವಾಗಲಾರದು.

### ಗ್ರಾಹಕರ ಸಹಕಾರ

ನನ್ನನ್ನು ಕೇಳುವುದಾದರೆ ಅನಿರ್ಬದ್ಧವಾದ ಖಾಸಗಿ ಉದ್ದಿಮೆಗಂಟಿಕೊಂಡ ಹಳೆಯಕಾಲದ ಬಂಡವಾಲಶಾಹಿ ಮತ್ತು ಮಾರ್ಕ್ಸನ ಭೌತಿಕ ಸಾಮ್ಯವಾದ ಇವೆರಡರ ಅವಸಾನವೂ ಕಟ್ಟಿಟ್ಟದ್ದು. ಬಂಡವಾಲ ಪದ್ಧತಿ ಇಂದುನೆಟ್ಟಗೆ ನಡೆಯುತ್ತಿಲ್ಲ, ಮಾರ್ಕ್ಸನ ಸಾಮ್ಯವಾದವು ಶುದ್ಧ ತತ್ವವಿದ್ದು ಅವ್ಯವಹಾರ್ಯವಿದೆ. ಅದನ್ನು ಬಿಟ್ಟು ಹೋದದ್ದೇ ಸೋವಿಯಟ್ಟಿನ ಗೆಲವಿಗೆ ಕಾರಣ. ಈ ಎರಡು ಪದ್ಧತಿಗಳೂ ಗ್ರಾಹಕರ ಸಹಕಾರವೆಂಬ ಹೊಸ ಪದ್ಧತಿಯ ಮೂಲಕ ಸ್ಥಾನಭ್ರಷ್ಟವಾಗುವವು. ಬ್ರಿಟನ್ನಿನಲ್ಲಿ ಒಟ್ಟುಗಟ್ಟಲೆ ವ್ಯಾಪಾರದ ಸಹಕಾರಿ ಸಂಘವು ಖಾಸಗಿಜನರ ಕೈಯಲ್ಲಿರುವ ಅತಿದೊಡ್ಡ ವ್ಯಾಪಾರಿ ಮತ್ತು ರಾಜಕೀಯ ಶಕ್ತಿಯಾಗಿ ಪ್ರತಿ ವರ್ಷವೂ ಹೆಚ್ಚುತ್ತ ಹೋಯಿತು. ಕೂಲಿಕಾರ ಪಕ್ಷದ ಟ್ರೇಡ್ ಯೂನಿಯನ ಕಾಂಗ್ರೆಸಿನ ಬಲವು ಅಧೋಮುಖವಾಗುವಂತೆ ತೋರಿತು.

### ಸದ್ಯದಲ್ಲಿ ಘರ್ಷಣೆ

ಸಂಘವು ಅಮೇರಿಕ ಮತ್ತು ಅದರ ಅನುಯಾಯಿಗಳಿಗೂ ರಶಿಯ ಮತ್ತು ಅದರ ಬೆಂಬಲಿಗರಿಗೂ ನಡುವೆ ಸರಿಯಾಗಿಕುಳಿತಿದೆ. ನಿರವಧಿಯಾಗಿ ಯುದ್ಧವನ್ನು ಸುಧಾರಣೆಯ ಮತ್ತು ಪ್ರಸಾದನದ ಆಶೆಯ ಮೂಲಕ ಮುಂಬರಿಸುತ್ತ ಹೋದರೆ— ಎರಡು ಪಕ್ಷದವರಲ್ಲೂ ಈಗಿಲ್ಲದಷ್ಟು ಅಟಂಬಾಂಬುಗಳು ಬೆಳೆದಾವು; ಆಗ "ಮೊದಲು ಹೊಡೆದಾತ ಮೂರುಪಟ್ಟು ಆಯುಧ ಸಂಗ್ರಹಮಾಡಿಕೊಂಡವನು" ಎಂಬ ನಾಣ್ಣುಡಿಯಂತಾಗುವುದು. ಆದುದರಿಂದ ಸಾಮರ್ಥ್ಯ ಪ್ರದರ್ಶನದ ಘರ್ಷಣವು ಸದ್ಯದಲ್ಲೇ ಒದಗಿ ಅನಂತರ ಯುದ್ಧವೇ ಇಲ್ಲದಂತಾಗುವುದು.

ಇಂದಿನ ಮಿಲಿಟರಿ ಪರಿಸ್ಥಿತಿಯನ್ನು ೧೯೩೬ ರಲ್ಲಿ ಲೊಕಾರ್ನೊ ಒಪ್ಪಂದವನ್ನು ಹಿಟ್ಲರನು (ಅದಕ್ಕೆ ಅವನು ಅಧಿಕಾರಕ್ಕೆ ಬಂದಮೇಲೆ ತಾನೇ ಸಹಿಮಾಡಿದ್ದನು) ಮುರಿದು ರ್‍ಹೈನ್‌ಲ್ಯಾಂಡಿಗೆ ನುಗ್ಗಿದಾಗಿನ ಪರಿಸ್ಥಿತಿಗೆ ಹೋಲಿಸಬಹುದಾಗಿದೆ. ಫ್ರಾನ್ಸ ಮತ್ತು ಇಂಗ್ಲೆಂಡುಗಳು ಆಗ ಒಪ್ಪಂದದಂತೆ ನಡೆದುಕೊಂಡಿದ್ದರೆ ಹಿಟ್ಲರನೆಂದೂ ಅವನ್ನು ತಡೆಯಲು ಶಕ್ತನಾಗುತ್ತಿದ್ದಿಲ್ಲ. ಅವನು ಹಿಂದಿರುಗಬೇಕಿತ್ತು ಮತ್ತು ಆಗ ೨ ನೆಯ ಜಾಗತಿಕ ಯುದ್ಧವೇ ಇಲ್ಲದಂತಾಗುತ್ತಿತ್ತು.

### ರಶಿಯಕ್ಕೆ ಯುದ್ಧ ಹೂಡುವ ಸಾಮರ್ಥ್ಯವಿಲ್ಲ

ಅಮೇರಿಕದ ನಾಳಿನ ಅಧ್ಯಕ್ಷ ಚುನಾವಣೆಯಲ್ಲಿ ಚೇಂಬರಲೇನ ತತ್ವಕ್ಕಾಗಲಿ ಏಕಾಕಿತ್ವಕ್ಕಾಗಲಿ ಗೆಲುವು ಸಿಗದು. ರಶಿಯಕ್ಕೆ ಯುದ್ಧಹೂಡುವ ಸಾಮರ್ಥ್ಯವಿಲ್ಲದುದರಿಂದ ಯುದ್ಧ ಸಂಭವಿಸುವುದು ಅಸಂಭವ. ರಶಿಯವೊಂದು ಆಕ್ರಾಮಕ ರಾಷ್ಟ್ರವೆಂದಾಗಲಿ, ಅದಕ್ಕೆ ಯುದ್ಧದ ಚಾಪಲ್ಯವಿದೆಯೆಂದಾಗಲಿ ವ್ಯಕ್ತಿಶಃ ನಾನು ನಂಬುವದಿಲ್ಲ. ಅದಕ್ಕೆ ಬಂಡವಾಲಶಾಹಿಯ ದೇಶಗಳಲ್ಲಿ ನಿಜವಾದ ಅಪನಂಬಿಕೆಯಿರುವುದು ಮತ್ತು ಶುದ್ಧ ಭೌತಿಕ ತತ್ವಪ್ರಣಾಲಿಯಿಂದ ಮತ್ತವಾಗಿ ಅದು ಕಾಲಕ್ರಮೇಣ ಇಡಿ ಜಗದಲ್ಲಿ ಗೆಲುವನ್ನು ಸಂಪಾದಿಸಬೇಕು ಎಂದುಕೊಂಡಿದೆ-ಇಷ್ಟೆ.

ಗಾಂಧೀಜಿಯ ಜಾಗತಿಕ ಪ್ರಭಾವವಿಂದು ಹೆಚ್ಚುತ್ತಿದೆ, ಅವರು ಬಹಳಮಟ್ಟಿಗೆ ಆ ವಿಷಯದಲ್ಲಿ ರಶಿಯವನ್ನು ತಿದ್ದಲು ಪ್ರಾರಂಭಿಸಿದರು."

### ಹೊಸ ಯೋಜನೆ

ಮೂರರ ಹೊಸ ಯೋಜನೆಯನ್ನು ಮೇಲೆ ಸಂಕ್ಷೇಪವಾಗಿ ಸೂಚಿಸಲಾಗಿದೆಯಷ್ಟೆ. ಇದರಲ್ಲಿ ಗ್ರಾಹಕರ ಸಂಘಟನೆಯೇ ಅತಿ ಮುಖ್ಯವಾದುದು. ಬೆಳೆವವರ ಮತ್ತು ಬಳಸುವವರ ನಡುವೆ ದಲಾಲರೂ ಅಂಗಡಿಕಾರರೂ ( Middlemen ಮಧ್ಯಸ್ಥರು ) ಜೀವಿಕೆಯನ್ನು ಸಂಪಾದಿಸಿಕೊಳ್ಳಬರುವುದರಿಂದ ಇಬ್ಬರಿಗೂ ಲಾಭ ಕಡಿಮೆಯೆಂಬುದು ಅನುಭವ ಸಿದ್ಧವಾದುದು. ಈ ನಡುವಣಿಗರನ್ನು ದೂರವಿಡುವುದಕ್ಕೋಸ್ಕರವೇ ಮಹಾತ್ಮರು ಕೂಡ ನೂಲುವ ಉದ್ಯಮದಲ್ಲಿ ಅ. ಭಾ. ನೂಲಿಗರ ಸಂಘವನ್ನೂ ಕೈಗಾರಿಕೆಯಲ್ಲಿ ಅ. ಭಾ. ಗ್ರಾಮೋದ್ಯೋಗ ಸಂಘವನ್ನೂ ಸ್ಥಾಪಿಸಿದರು. ನಮ್ಮಲ್ಲಿಯ ಸುವ್ಯವಸ್ಥಿತವಾದ ಸಹಕಾರಿ ಸಂಘಗಳು ತಮ್ಮದೇ ಆದ ರೀತಿಯಿಂದ ಬಳಕೆಗಾರರಿಗೆ ಬಹಳ ಉಳಿತಾಯವನ್ನೂ ಪೂರೈಕೆಯ ಸೌಲಭ್ಯವನ್ನೂ ಒದಗಿಸಿಕೊಟ್ಟಿವೆ. ಇದೇ ಮಾದರಿಯ ಬೃಹದಾಕಾರದ ಗ್ರಾಹಕ ಸಂಘಗಳ ಮಹಾಮಂಡಲ ರಚಿತವಾದರೆ ಇಡಿ ದೇಶದಲ್ಲಿ ವ್ಯಾಪಾರಿಗಳು (ಬಂಡವಾಲಿಗರು) ತಮ್ಮ ಮನಸ್ಸಿಗೆ ಬಂದಂತೆ ಸಾಮಾನುಗಳ ದರವನ್ನು ಏರಿಸಲು ಸಂಧಿ ಸಿಗುವುದಿಲ್ಲ; ಅಲ್ಲದೆ ಉತ್ಪಾದನ ಕಾರ್ಯಕ್ಕೇನೂ ನೆರವಾಗದೆ ಕೇವಲ ಸಾರಿಗೆ, ಸಂಗ್ರಹ, ವಿಕ್ರಯಗಳಿಂದ ಮಿತಿಮೀರಿ ಗಳಿಸಲು ಅವರಿಗೆ ಅವಕಾಶ ದೊರಕುವುದಿಲ್ಲ. ಇದರಿಂದ ವಸ್ತುಗಳ ಪೂರೈಕೆಯ ಮೇಲೆ ನಿಯಂತ್ರಣವಿಟ್ಟಂತಾಯಿತು. ಇದರ ಮೇಲೆ ಹಳ್ಳಿಗರೂ ಇತರ ಚಿಕ್ಕ ಚಿಕ್ಕ ಕೈಗಾರಿಕೆ ಮತ್ತು ಕೃಷಿ ಕ್ಷೇತ್ರಗಳಲ್ಲಿಯ ಉತ್ಪಾದಕರೂ ಅಂಗಡಿಕಾರರಿಗೆ ಅವರು ಹೇಳಿದ ಬೆಲೆಗೆ ಬೆಳಸನ್ನು ಮಾರಿ ನಷ್ಟಹೊಂದುವುದನ್ನು ತಪ್ಪಿಸಿ ಸಂಘವೇ ಸ್ವತಃ ನಿಷ್ಪಕ್ಷಪಾತ ರೀತಿಯಿಂದ ಕೊಳ್ಳುವುದು. ಸಾರಿಗೆಗಾಗಿ ವ್ಯಯಿಸುವ ಅಪಾರ ಧನವನ್ನು ಉಳಿಸುತ್ತದೆ. ಈ ಸಂಘಗಳು ರಿಜಿಸ್ಟರ್ಡ ಇದ್ದು, ಗ್ರಾಹಕತ್ವದಲ್ಲಿರುವ ಉತ್ಪಾದಕರನ್ನೂ ಪ್ರತಿನಿಧಿಸುತ್ತ, ಸರಕಾರದ ಪರಿಶೀಲನಕ್ಕೆ ಒಳಪಟ್ಟಿರುವುದು ಅವಶ್ಯಕ. ಇಷ್ಟಲ್ಲದೆ ಇದೇ ಗ್ರಾಹಕ ಸಂಘಗಳನ್ನು ಸಾಮಾನ್ಯ ಜನರ ಪ್ರಾತಿನಿಧಿಕ ಸಂಸ್ಥೆಯೆಂದು ತಿಳಿದು ಅದರ ಮೂಲಕ ಸರಕಾರವು ಆಡಳಿತದ ಬಗ್ಗೆ ಸಾಕ್ಷಾತ್ ಪ್ರಜೆಗಳ ನೇರವಾದ ಸಲಹೆ, ಅಭಿಪ್ರಾಯಗಳನ್ನು ಪಡೆಯಬಹುದು.

[ ೧೬ನೆಯ ಪುಟ ನೋಡಿರಿ ]




## ಗ್ರಂಥವಿಜ್ಞಾನ

ಸಂಪಾದಕರು, ಸಾಂಗಲಿ ವೆಂಕಟೇಶ. ಪ್ರಕಾಶಕರು, ಕರ್ನಾಟಕಸಂಘ ಸಂಧುಗಿರಿ ಸದನ ಮುಂಬಯಿ ೪. ಪುಟಗಳು ೯೪+೧೦ +೨೦. ಬೆಲೆ. ೨ರೂಪಾಯಿ.

ಕನ್ನಡ ಸಾಹಿತ್ಯದಲ್ಲಿ ಈ ಬಗೆಯ ಉಪಯುಕ್ತ ವಿಷಯಗಳನ್ನು ಕುರಿತು ಬರೆದ ಪುಸ್ತಕಗಳು ಇಲ್ಲವೇ ಇಲ್ಲ. ಅದ್ದರಿಂದ ಈ ಪುಸ್ತಕವನ್ನು ಸಂಪಾದಿಸಿದ ಶ್ರೀ ಸಾಂಗಲಿ ವೆಂಕಟೇಶ ಅವರು ಅಭಿನಂದನಾರ್ಹರು. ಕರ್ನಾಟಕದಲ್ಲಿಯ ಎಲ್ಲ ವಾಚನಾಲಯಗಳೂ ಈ ಪುಸ್ತಕವನ್ನು ಅವಶ್ಯವಾಗಿ ಸಂಗ್ರಹಿಸಬೇಕಾದ್ದು. ಹೊಸದಾಗಿ ಹೊರಡತಕ್ಕ ಪುಸ್ತಕಾಲಯ ವಾಚನಾಲಯಗಳಂತೂ ಇದನ್ನು ಓದಿಯೇ ತಮ್ಮ ಸಂಸ್ಥೆಯ ಆಡಳಿತ ಬೆಳವಣಿಗೆ ಮೊದಲಾದವುಗಳ ಬಗ್ಗೆ ಸರಿಯಾದ ಕಲ್ಪನೆಪಡೆಯತಕ್ಕದ್ದು.

ಕರ್ನಾಟಕದಲ್ಲಿ ವಾಚನಾಲಯಗಳ ಚಳವಳಿ, ವಾಚನಾಲಯಗಳ ಅಭಿವೃದ್ಧಿ, ಓದುಗ, ಗ್ರಂಥಾಲಯ, ವರ್ಗೀಕರಣ ಪದ್ಧತಿ, ಭಂಡಾರಿಗ, ಗ್ರಂಥಶೋಧನ, ಗ್ರಂಥಸಂಗ್ರಹ, ಗ್ರಂಥರಕ್ಷಣೆ, ಗ್ರಂಥಪ್ರಸಾರ ಎಂದು ಮೊದಲಾಗಿ ಅತ್ಯಗತ್ಯ ವಿಷಯಗಳನ್ನು ಕುರಿತು ಪ್ರಕರಣಗಳಿವೆ. ಪರಿಶಿಷ್ಟದಲ್ಲಿ ಕನ್ನಡನಾಡಿನಲ್ಲಿದ್ದ ಗ್ರಂಥಮಾಲೆಗಳು, ವಾಚನಾಲಯಗಳು, ನಿಯತಕಾಲಿಕಗಳು, ಪುಸ್ತಕ ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು ಈ ಬಗೆ ಉಪಯುಕ್ತ ಕೈಪಿಡಿ ಇದೆ. ಒಟ್ಟಿನಲ್ಲಿ ನಾವು ಈ ಚಿಕ್ಕಪುಸ್ತಕವನ್ನು ಆದರ ಪೂರ್ವಕ ಬರಮಾಡಿಕೊಳ್ಳುತ್ತೇವೆ.

## ಹೂದೋಟ,(ಭಾಗ೧.)

ಬರೆದವರು:...ಕರ್ನಾಟಕದ ವಿವಿಧ ಲೇಖಕರು. ಪುಟಗಳು ೨೪೯ ಬೆಲೆ ರೂ ೩॥

ಈ ಕಥಾಸಂಕಲನದಲ್ಲಿ ಹದಿನೆಂಟು ಕಥೆಗಳಿವೆ. ಇವುಗಳಲ್ಲಿ ವಿಜ್ಞಾನದಕೂಸು, ಸುನೀತಿ, ಗಂಗಿ, ಅಯ್ಯೊ, ಮಾತೃಹೃದಯ, ಚೂರಿಯಕಥೆ, ಪೂರಿಬಂದದಾರಿ, ತಿಳಿಯದಸಾವು, ದೈವೇಚ್ಛೆ, ರಕ್ಷಾಬಂಧನ ಎಂಬ ಕತೆಗಳು ಒಳ್ಳೆಯವಾಗಿವೆ. ಮೊದಲನೆಯದರಲ್ಲಿ ಒಬ್ಬ ಸ್ತ್ರೀಯ ಪುರಷದ್ವೇಷದ ವಿಕೃತಪರಿಣಾಮ ಕೊಡಲಾಗಿದೆ. ಎರಡನೆಯದರಲ್ಲಿ ಸೊಸೆಯೊಬ್ಬಳ ಸತ್ಯಭಾಮಾವತಾರದ ಸ್ವರೂಪವನ್ನು ವಿವರಿಸಲಾಗಿದೆ. ಮೂರನೆಯದರಲ್ಲಿ ಮೋಸ್ಸು ಹೋಗಿ ಅಳಿಯನಾಗಿ ಪರಿವರ್ತಿಸಿದ ಚಿತ್ರವನ್ನು ವರ್ಣಿಸಲಾಗಿದೆ. ನಾಲ್ಕನೆಯದರಲ್ಲಿ ಪ್ರಣಯ ಪರೀಕ್ಷೆಯಿದೆ. ಅದರಲ್ಲಿ ಹಣ, ಗುಣಗಳಲ್ಲಿ ಎರಡನೆಯದನ್ನು ಆರಿಸಿಕೊಳ್ಳಲಾಗಿದೆ. ಐದನೆಯದರಲ್ಲಿ ಮಾತೃಹೃದಯವು ಜಾತ್ಯಂಧತೆಯನ್ನು ಗೆದ್ದ ಔದಾರ್ಯದ ನಿದರ್ಶನವಿದೆ. ಆರನೆಯದರಲ್ಲಿ ಆಕಸ್ಮಿಕ ಘಟನೆಯೊಂದರ ಮೂಲಕ ಒಬ್ಬನು ತನ್ನ ಮಿತ್ರನು ಕೊಲೆಯಾದದ್ದನ್ನು ಕಂಡು ಮರುಗುವ ದೃಶ್ಯವಿದೆ. ಏಳನೆಯದರಲ್ಲಿ ಸಂಶಯ ಪಿಶಾಚದಿಂದ ಪೀಡಿತಳಾದ ಪ್ರೇಯಸಿಯೊಬ್ಬಳ ಪ್ರಿಯತಮನ ಮೇಲಿನ ವಿಶ್ವಾಸವು ಆಕಸ್ಮಿಕ ಕಾರಣದಿಂದ ಪುನಹಾ ಉದ್ಧೃತವಾಗುವುದರ ವಿವರವಿದೆ. ಎಂಟನೆಯದರಲ್ಲಿ ಬಡವನಬಾಳು ಹುಲ್ಲುಕಡ್ಡಿಗೆ ಸರಿ, ಎಂಬುದನ್ನು ಕರುಣಾ ಜನಕವಾಗಿ ನಿರೂಪಿಸಲಾಗಿದೆ. ಒಂಬತ್ತನೆಯದರಲ್ಲಿ ಸತಿಪತಿಭಕ್ತಿಯನ್ನು ಐಶ್ವರ್ಯವಂತರ ಗರ್ವವನ್ನು ಸ್ವಾರಸ್ಯವಾಗಿ ವರ್ಣಿಸಲಾಗಿದೆ. ಹತ್ತನೆಯದರಲ್ಲಿ ಪಂಜಾಬದ ಮುಸ್ಲಿಂ ಗೂಂಡಾಗಿರಿಯನ್ನು ಮನೋರಂಜಕವಾಗಿ ವಿವರಿಸಲಾಗಿದೆ. ಹೀಗೆ ಇನ್ನೂ ಕರ್ನಾಟಕದ ವಿವಿಧ ಲೇಖಕರಿಂದ ಪುಸ್ತಕಗಳು ದೊರೆಯಲೆಂದು ಹಾರೈಸುತ್ತೇವೆ. ಸರ್ವರೂ ಇದನ್ನು ಓದಿ ಆನಂದಿಸಬಹುದು.

## ಹವಳದ್ವೀಪ

ಲೇಖಕರು: ಎ. ಎಸ್. ಮೂರ್ತಿರಾವ್ ಪ್ರಕಾಶಕರು: ಕಾರ್ಯಾಲಯ ಮೈಸೂರ ಪುಟಗಳು ೧೦೫. ಬೆಲೆ ರೂ. ೧-೮-೦.

ಈ ಮಾದರಿಯ ಪುಸ್ತಕವು ನಮ್ಮ ಕನ್ನಡ ವಿದ್ಯಾರ್ಥಿಗಳಿಗೆ ತೀರ ಹೊಸದೆಂದು ಹೇಳಬಹುದು. ನಮ್ಮ ಯುವಕರಿಗೆ ನಾವಿಕರ ದಿನಚರಿ ಮತ್ತು ಅವರ ಸಾಹಸದ ಕೃತ್ಯಗಳ ಬಗ್ಗೆ ಪರಿಚಯ ಮಾಡಿಕೊಡಲು ಈ ಪುಸ್ತಕವು ಪ್ರಯತ್ನಮಾಡಿದೆ. ನಮ್ಮ ವಿದ್ಯಾರ್ಥಿಗಳು ಈ ಪುಸ್ತಕವನ್ನು ಒಳ್ಳೆ ಹುರುಪಿನಿಂದ ಓದುವರೆಂದು ಆಶೆ. ಪುಸ್ತಕದಲ್ಲಿಂತು ಕಥಾನಾಯಕರು ಪಡಸುಮುಳುಗ.ಹಾಗ ತೋರಿದ ಧೈರ್ಯ ಮತ್ತು ದಡೆಗೆ ತಲುಪಿದ ಮೇಲೆ ಕೆಲಕಾಲ ಧೈರ್ಯಗುಂದಿದ್ದರೂ ಆ ನಿರ್ಜನ ಪ್ರದೇಶವನ್ನಾಳುವವರು ತಾವೇ ಎಂದು ತಿಳಿದುಕೊಂಡು ತಮಗೆ ಅವಶ್ಯಕ ವಸ್ತುಗಳನ್ನು ಹುಡುಕಿ ಅದಷ್ಟು ತಮ್ಮ ಜೀವನವನ್ನು ಸುಖಮಯ ಮಾಡಲೋಸುಗ ಸತತ ಸಾಹಸ ಪಟ್ಟಿದು ಮತ್ತು ಕಾಡು ಜನರ ಕೈಯಿಂದ ಅನೇಕ ಪ್ರಸಂಗದಲ್ಲಿ ಪಾರಾದ ಬಗೆ ಮುಂತಾದ ಅನೇಕಾನೇಕ ಸಂಗತಿಗಳು ನಮ್ಮ ವಿದ್ಯಾರ್ಥಿಗಳ ಮೆಚ್ಚುಗೆಗೆ ಪಾತ್ರ ವಾಗುವವು ಎಂದು ಒತ್ತಿ ಹೇಳಬಹುದು. ಭಾಷೆ ಸುಲಭವಾಗಿದೆ ಶೈಲಿ ಸರಳವಾಗಿದೆ. ಲೇಖಕರದು ಪಳಗಿದ ಕೈ.

## ಕನ್ನಡ ಸಾಹಿತ್ಯ ವಾಹಿನಿ

ಲೇಖಕರು – ಎನ್. ಕೆ. ಕುಲಕರ್ಣಿ ಎಂ. ಎ; ಬಿ. ಟಿ.

ಪ್ರಕಾಶಕರು:- ಕಥಾಕುಂಜ ಪ್ರಕಟನಾಲಯ ಬೆಳಗಾವಿ.

ಬೆಲೆ ೨ ರೂ. ೮ ಆ. ಪುಟಗಳು ೧೫೯.

ಇದು ಈ ಪುಸ್ತಕದ ಎರಡನೆಯ ಆವೃತ್ತಿ. ಅಲ್ಲಿ ಇಲ್ಲಿ ಹೊಸ ವಿಷಯವು ಸೇರ್ಪಡೆಯಾಗಿ ಮುದ್ರಿತವಾಗಿದೆ. ಕನ್ನಡ ವಾಂಗ್ಮಯದ ಬೆಳವಣಿಗೆಯನ್ನೂ ಪ್ರಾಚೀನ ಕಾಲದಿಂದ ಹರಿದು ಬಂದ ನಮ್ಮ ಸಾಹಿತ್ಯದ ಇತಿಹಾಸವನ್ನೂ ಸಂಕ್ಷೇಪವಾಗಿ ಅರಿಯಬೇಕೆಂಬವರಿಗೆ ಈ ಪುಸ್ತಕ ಬಹಳ ಅನುಕೂಲವಾಗಿದೆ. ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿಗಳಿಗಂತೂ ಇದು ಉಪಯುಕ್ತ ಕೈಪಿಡಿಯಂತಿದೆ. ವಿಷಯವು ಹತ್ತು ಮುಖವಾಗಿ ಹರಿದು ಕನ್ನಡ ಸಾಹಿತ್ಯ ವಿಷಯಕ ಸಮಗ್ರ ಕಲ್ಪನೆಯು ಓದಿದವರಿಗೆಲ್ಲ ಬರುವಂತಿದೆ. ವಿವೇಚನೆಯೂ ಭಾಷೆಯೂ ತಿಳಿತಿಳಿಯಾಗಿದ್ದು ಅಭ್ಯಾಸಕ್ಕಾಗಿ ಅಲ್ಲದೆ ಕೇವಲ ರಂಜನೆಗಾಗಿ ಕೂಡ ಎಲ್ಲರೂ ಓದಬಹುದಾಗಿದೆ.

## ಜಯ ಹಿಂದ (೧೦ ನೇ ಜನ್ಮ ದಿನಾಂಕ)

ಸಂಪಾದಕರು:— ರಾ. ವೆ. ಕರಗುದರಿ ಹುಬ್ಬಳ್ಳಿ. ಪುಟಗಳು ೮೪. ಬೆಲೆ ೮ ಆಣೆ.

ಇದರಲ್ಲಿ ಅನೇಕ ವಿಖ್ಯಾತ ವ್ಯಕ್ತಿಗಳ ಮತ್ತು ಲೇಖಕರ ಬರೆಹಗಳಿವೆ. ಬರೆಹಗಳು ವೈವಿಧ್ಯತೆಯಿಂದ ತುಂಬಿದ್ದು ಓದಲು ಕುತೂಹಲ ಹುಟ್ಟಿಸುತ್ತವೆ. ಸಂಚಿಕೆಯು ಅಲ್ಲಲ್ಲಿ ಕವನಗಳಿಂದ ಚಿತ್ರಗಳಿಂದ ಅಲಂಕೃತವಾಗಿದೆ. ಆವರಣಪತ್ರವೂ ಸೊಗಸಾಗಿ ವರ್ಣರಂಜಿತವಾಗಿದೆ. ಎಲ್ಲ ಲೇಖಕರ ಬರೆಹಗಳೂ ಅವರವರ ಭಾವಚಿತ್ರಗಳಿಂದ ಪ್ರಕಟವಾದುದು ಈ ಸಂಚಿಕೆಯ ವೈಶಿಷ್ಟ್ಯವೆಂದು ಹೇಳಬಹುದು. ಪರಿಶ್ರಮದ ಕುಸುಮಗಳಿಂದ ತುಂಬಿದ ಜಯ ಹಿಂದದ ಈ ವಿಶೇಷ ಸಂಚಿಕೆಯನ್ನು ಆದರದಿಂದ ಸ್ವಾಗತಿಸುತ್ತೇವೆ.

## ಬೇಂದ್ರೆ ಸತ್ಕಾರ ಸಮಿತಿಯ ವರದಿ

೮೦ ಪುಟಗಳ ಮೊತ್ತದ ಈ ವರದಿಯು ಒಳ್ಳೆ ನೀಟಾಗಿ ಮುದ್ರಿತವಾಗಿದ.

ಕವಿವರ ಬೇಂದ್ರೆಯವರನ್ನು ಅಖಿಲ ಕರ್ನಾಟಕವು ಒಂದು ಮಹಾಸಮಾರಂಭದ ಮೂಲಕ ಪ್ರಶಸ್ತಿ ಕೊಟ್ಟು ಸನ್ಮಾನಿಸಿತು. ಅದು ಬಂದೂವರೆ ವರ್ಷದ ಹಿಂದಿನ ಮಾತು. ಈ ವರದಿಯಲ್ಲಿ ಆ ಸಮಾರಂಭದ ವಿವರವೂ ಸಹಾಯ ಮಾಡಿದ ಮಹನೀಯರ ನಾಮಾವಲಿಯೂ ಉಂಟು. ಕವಿವರರ ಕೃತಿಗಳ ವಿಷಯದಲ್ಲಿ ಇದೊಂದು ಸಣ್ಣ ಕೈಪಿಡಿಯಂತಿದೆ. ಒಳ್ಳೆಯ ಐದು ಚಿತ್ರಗಳಿವೆ. ಒಂದು ಮಾತನ್ನೂ ಬಿಡದೆ ವರದಿ ಮಾಡಿದ್ದಕ್ಕೆ ಉತ್ಸವ ಮಂಡಲದ ಆಡಳಿತಗಾರರನ್ನು ಅಭಿನಂದಿಸುತ್ತೇವೆ.

## ಕನ್ನಡ ಕೇಸರಿ ಸಂಗೊಳ್ಳಿ ರಾಯಣ್ಣ

(ಐತಿಹಾಸಿಕ ಸಂಗೀತ ನಾಟಕ)

ಲೇಖಕರು, ಬಿ. ಕಲ್ಯಾಣಶರ್ಮ. ಪ್ರಕಾಶಕರು, ಪ್ಯಾಟಿ ಶ್ಯಾಮರಾಯರು. ಕಾರ್ಯದರ್ಶಿ ಬುಕ್ ಸೇಲರ್ಸ ಮತ್ತು ಪಬ್ಲಿಸರ್ಸ ಅಸೋಸಿಯೇಶನ್ ಬೆಳಗಾವಿ. ಪುಟಗಳು ೮೩ ಬೆಲೆ ೧ ರೂ. ೮ ಆಣೆ.

ಸಂಗೊಳ್ಳಿ ರಾಯಣ್ಣನ ಹೆಸರನ್ನು ಕೇಳದ ಹಳ್ಳಿಗರಿಲ್ಲ. ರಾಯಣ್ಣನ ವೀರ ಶ್ರೀಯುಕ್ತ ಸಾಹಸ ಲಾವಣಿ ಹಾಡು ಹೇಳಿ ಕೇಳಿ ಹಳ್ಳಿಗರು ಹುರುಪುಗೊಳ್ಳುವರು. ರಾಯಣ್ಣನ ಸಾಹಸದ ಜೀವನವನ್ನು ನಾಟಕ ರೂಪವಾಗಿ ಜನರೆದುರಿಗೆ ಇರಿಸಿ ಲೇಖಕರು ಕನ್ನಡಿಗೆ ಉಪಕಾರ ಮಾಡಿದ್ದಾರೆ. ರಾಯಣ್ಣನು ಪುಂಡನಲ್ಲ. ತನ್ನ ರೀತಿಯಿಂದ ದೇಶಾಭಿಮಾನ ಪ್ರೇರಿತನಾಗಿ ಹೋರಾಡಿದ ವೀರನೀತನೆಂದು ಲೇಖಕರು ಚಿತ್ರಿಸಿ ಈ ಕತೆಗೆ ಒಂದು ಐತಿಹಾಸಿಕ ಮಹತ್ವವನ್ನು ತಂದು ಕೊಟ್ಟಿದ್ದಾರೆ. ತರುಣರ ನರನಾಡಿಗಳಲ್ಲಿ ಹುರುಪು ತುಂಬಲು ಇಂತಹ ಐತಿಹಾಸಿಕ ವೀರರ ಜೀವನವು ಸಾಹಿತ್ಯದಲ್ಲಿ ನಾನಾರೂಪವಾಗಿ ಪ್ರದರ್ಶಿತವಾಗಬೇಕು.

ಇಂತಹ ನಾಟಕಗಳು ಜನರಿಗೆ ಬೇಕು ಎನ್ನುವದಕ್ಕೆ ಈ ಪುಸ್ತಕದ ೨ ನೆಯ ಮುದ್ರಣವೇ ಸಾಕ್ಷಿ. ಇಲ್ಲಿ ಬಳಕೆಯಾದ ಭಾಷೆಗೆ ಇನ್ನಷ್ಟು ಸಾಹಿತ್ಯದಸಂಸ್ಕಾರವಿದ್ದರೆ ಚೆನ್ನಾಗಿರುತಿತ್ತು. ಇಲ್ಲಿ ಸೇರ್ಪಡೆಗೊಂಡ ಹಾಡುಗಳಿಗೂ ಈ ಮಾತು ಅನ್ವಯಿಸುವದು. ಇದನ್ನು ಬರೆದ ಲೇಖಕರು ಇನ್ನೂ ಇಂತಹ ಐತಿಹಾಸಿಕ ದೃಶ್ಯಗಳನ್ನು ಜನತೆಗೆ ಒದಗಿಸಿ ನಮ್ಮ ಸಾಹಿತ್ಯದ ಈ ಕೊರತೆಯನ್ನು ಹಿಂಗಿಸುವರೆಂದು ಆಶಿಸಿದ್ದೇವೆ.

## ಜೀವನಾಧಾರ (ಮಾಸಪತ್ರಿಕೆ)

ಸಂಪಾದಕರು:— ಆಯುರ್ವೇದತೀರ್ಥ ಜಿ. ವಿ. ಪುರಾಣಿಕ. ವಿಜಾಪೂರ ವಾರ್ಷಿಕ ಚಂದಾ ೪ ರೂ ಬಿಡಿಂಚಿಕೆ ೫ ಆಣೆ.

ನಮ್ಮ ಕೈಗೆ ಬಂದುದು ೧—೨ ಸಂಯುಕ್ತ ಸಂಚಿಕೆ ಇದು ಅ. ಕರ್ನಾಟಕದ ಅಧಿಕೃತ ವೈದ್ಯ ಸಂಘದ ಅಂಗವಾಗಿ ವಿಜಾಪುರದಿಂದ ಹೊರಡುವ ಮಾಸಪತ್ರಿಕೆ ಮಾಧವನಿದಾನವೆಂಬ ವೈದ್ಯಗ್ರಂಥದ ಅನುವಾದವು ಇದರಲ್ಲಿ ಪ್ರಕಟವಾಗತೊಡಗಿದೆ. ಮುಂಬಯಿ ಸರಕಾರದ ಅಧಿಕೃತವೈದ್ಯರ ಪಟ್ಟಿಯನ್ನು ಕೊಡಲಾಗಿದ್ದು ವೈದ್ಯರಿಗೆ ನೋಡಲು ಅನುಕೂಲವಾಗಿದೆ. ಈ ಹೊಸ ಪ್ರಕಟನೆಯನ್ನು ನಾವು ಆದರ ಪೂರ್ವಕ ಸ್ವಾಗತಿಸುತ್ತೇವೆ ಮತ್ತು ಆಯುರ್ವೇದದ ರಹಸ್ಯ ಭೇದಕ್ಕೆ ಈ ಪತ್ರಿಕೆ ಹೆಣಗಲಿ ಎಂದು ಹಾರೈಸುತ್ತೇವೆ.

## ಶಾಂತಿಸಂದೇಶ (ಮಾಸಪತ್ರಿಕೆ)

ಸಂಪಾದಕರು, ಎ. ಎ. ಹಕೀಮ, ಎಂ. ಬಿ. ಆರ್. ಎಸ್. ಎಂ. ಉಪಸಂಪಾದಕ, ಎಂ. ಬಿ. ಜಿ. ಬರದೂರ. ವಾರ್ಷಿಕ ವರ್ಗಣಿ ೩ ರೂ. ಬಿಡಿಸಂಚಿಕೆ ೫ ಆಣೆ.

ಇದು ಹುಬ್ಬಳ್ಳಿಯ ಶಾಂತಿಸಂದೇಶ ಕಾರ್ಯಾಲಯದಿಂದ ಪ್ರಕಟವಾಗುವ ಇಸ್ಲಾಂ ಧರ್ಮ ರಹಸ್ಯವನ್ನು ನಿರೂಪಿಸುವ ಪತ್ರಿಕೆ. ಈ ಸಂಚಿಕೆಯಲ್ಲಿ ಶಾಂತಿ ಸಂದೇಶಕನ ಸಂದೇಶ ಚರಿತ್ರ ಇವೆ. ಮುಸಲ್ಮಾನರಲ್ಲದವರೂ ಇದನ್ನು ಓದಿ ಪ್ರಯೋಜನ ಹೊಂದುವಂತಿದೆ. ಈ ಹೊಸ ಪತ್ರಿಕೆಯನ್ನು ಸ್ವಾಗತಿಸುತ್ತೇವೆ.

## ಸಹ್ಯಾದ್ರಿ

ಬರೆದವರು ಶ್ರೀ. ವಿ. ಜಿ. ಭಟ್ಟರು, ಎಂ. ಎ., ಪ್ರಕಾಶಕರು ಪರ್ಣಕುಟಿ ಗ್ರಂಥಮಾಲೆ, ಗೋಕರ್ಣ. ಪುಟ ೯೦, ಬೆಲೆ ೧।ರೂ.

'ಸಹ್ಯಾದ್ರಿ' ಯಲ್ಲಿ ೨೦ ಕಥೆಗಳಿವೆ. 'ಜಟ್ಟಿನ ಸಾಕ್ಷಿ' ದೋಣಿ, 'ಮನೆಹೊದಿಕೆ' ,'ಸುಬ್ರಹ್ಮಣ್ಯನ ಮದುವೆ' 'ಬಳಚಿಯಬುಟ್ಟಿ' ದನಗಾಹಿ' 'ಸುಬ್ಬನ ಮೇಳದ ಪುಟ್ಟ' 'ಮಜ್ಜಿನ ಮಗು' 'ಸಕಲವಿದ್ಯೆ ಸಣ್ಣಪ್ಪ' ಮುಂತಾದುವು ಸರಸವಾಗಿವೆ. ಈ ಕಥೆಗಳಲ್ಲಿ ಉತ್ತರ ಕನ್ನಡದ ಜನರ ಜೀವನದ ನಾನಾ ಮುಖಗಳು ಚಿತ್ರಿತವಾಗಿವೆ. ಚಿತ್ರಣದಲ್ಲಿ ಹಾಸ್ಯಪ್ರಧಾನ್ಯವಿದೆ. ಇದೊಂದು ಒಳ್ಳೆಯ ಲಘು ಸಾಹಿತ್ಯರಾಶಿಗೆ ಸೇರುವಂಥ ಸಂಕಲನ. ಸರ್ವ ವಿಧದಿಂದಲೂ ಪ್ರೋತ್ಸಾಹಾರ್ಹವಾಗಿದೆ.

## ಮುಂಬೆಳಗು (ಕವಿತಾ ಸಂಗ್ರಹ)

ಲೇಖಕ:— ಅ. ಕ. ಸಂಕಪ್ಪ ರೈ. ಪ್ರಕಾಶಕರು :— ಬಾಳಿಗ ಎಂಡ್ ಸನ್ಸ್, ರಥ ಬೀದಿ, ಮಂಗಳೂರು. ಪುಟಗಳು ೪೩. ಬೆಲೆ ೧೨ ಆಣೆ.

ಈ ಚಿಕ್ಕ ಪುಸ್ತಕದಲ್ಲಿ ಬೇರೆ ಬೇರೆ ವಿಷಯಗಳ ಬಗ್ಗೆ ೧೯ ಕವಿತೆಗಳಿವೆ. ಮುಂಬೆಳಗು, ಹಗಲುಗನಸು ಎಂಬ ಕವನಗಳಲ್ಲಿ 'ಅಂಬಿಕಾತನಯದತ್ತ'ರ ಕವಿತೆಗಳ ಛಾಯೆಯು ಕಂಡು ಬರುವದು. ಹೃದಯದೊಳಗೆ ಎಂಬ ಕವನದ ಓಟವೂ ಭಾವತರಂಗಗಳೂ ಚೆನ್ನಾಗಿವೆ. ಮಾತುಗಳಿಗೆ ಇನ್ನೂ ರಸಸೇಚನೆ ಬೇಕು. ಕವಿತೆಗಳನ್ನೆಲ್ಲ ಓದಿ ನೋಡಿದರೆ ಇವನ್ನು ಬರೆದವರು ಎಳಕರೆಂದು ತೋರಿ ಬರುವದು. ಲೇಖಕರ ಕೈಕುಸುರಿ ಹೃದಯದಗಲ ದೊಡ್ಡುಗಳಿಗೆ ರಸದುಂಬಲಿ.

## ಸಾದರ ಸ್ವೀಕಾರ

### ಬುರಕಿ (ಲಗು ಕತೆಗಳು)

ಲೇಖಕರು, ವ್ಹಿ. ಜಿ. ಭಟ್ಟ ಎಂ. ಎ. ಪ್ರಕಾಶಕರು, ಪರ್ಣಕುಟಿ ಗ್ರಥ ಮಾಲೆ ಗೋಕರ್ಣ ಮಾರಾಟಗಾರರು. ಸಮಾಜ ಪುಸ್ತಕಾಲಯ ಧಾರವಾಡ, ಪುಟಗಳು ೫೩. ಬೆಲೆ ೧೨ ಆಣೆ.

### ಭಾರತೀಯ ಸಂಸ್ಕೃತಿ

ಲೇಖಕರು, ಸಾನೆ ಗುರೂಜಿ. ಅನುವಾದಕರು, ಭಾಸ್ಕರ ಗೋವಿಂದ ಗೋಖಲೆ, ವಕೀಲ ಧಾರವಾಡ. ಪ್ರಕಾಶಕರು, ಶ್ರೀ ಬಸವಣ್ಣೆಪ್ಪ ಸಂಕೇಶ್ವರ ಹುಬ್ಬಳ್ಳಿ. ಬೆಲೆ ೫ ರೂ. ಪುಟಗಳು ೩೭೩.

### ೧೮೫೭

ಬರೆದವರು, ಕೃ. ಗೊ. ಜೋಶಿ ಬಿ. ಎ. ಬಿ. ಟಿ. ಪ್ರಕಾಶಕರು, ಬಾ. ಗು. ಅವಧಾನಿ ವಿ.೦ಚನಬಳ್ಳಿ ಚಾವಡಿ, ಧಾರವಾಡ. ಬೆಲೆ ಸಾದಾ ಪ್ರತಿ ೪ ರೂ. ಉತ್ತಮ ಪ್ರತಿ ೫ ರೂ. ಪುಟಗಳು ೩೩೮.

### ಶಿಲ್ಪಿ ಚಕ್ರವರ್ತಿ (ನಾಟಕ)

ಲೇಖಕರು, ಬಾದರಾಯಣ ಮೂರ್ತಿ. ಪ್ರಕಾಶಕರು, ಎಚ್. ಎಸ್. ರಾವ್ ಬ್ರದರ್ಸ, ಚಿಕ್ಕಪೇಟೆ ಬೆಂಗಳೂರು ನಗರ. ಬೆಲೆ ೧೨ ಆ. ಪುಟಗಳು. ೫೮.

### The Editor & Publisher

(ಇಂಗ್ಲಿಷ ಮಾಸಿಕ)

ಸಂಪಾದಕ. ಪಿ. ಜಿ. ರಾವ, ಯುನಿಟಿ ಪ್ರಿಂಟಿಂಗ ಪ್ರೆಸ, ೧೬೬ ಹಾರ್ನಬಿ ರೋಡ, ಮುಂಬಯಿ. ವಾರ್ಷಿಕ ಚಂದಾ ೧೦ ರೂ. ಬಿಡಿ ಪ್ರತಿ ೧ ರೂ. ಪುಟಗಳು ೧೯೪೮ ಜನೇವರಿ ಸಂಚಿಕೆಯಲ್ಲಿ ೨೬.

### ಕೋದಂಡನ ಉಪನ್ಯಾಸಗಳು

(ದ್ವಿತೀಯ ಭಾಗ)

ಲೇಖಕರು:— ಜಿ. ವಾಮನ ಭಟ್ಟ, ಬಿ. ಎ. ಎಲ್. ಟಿ., ಮಿತ್ರಮಂಡಳ ಮಂಗಳೂರು. ಪ್ರಕಾಶಕರು:— ಬಾಳಿಗಾ ಎಂಡ್ ಸನ್ಸ್ ಮಂಗಳೂರು. ಪುಟಗಳು ೮೬ ಬೆಲೆ ೧ ರೂ. ೪ ಆ.

---

### ವಿಶ್ವ ಬ್ರಹ್ಮವೃತ್ತ

ಸಂಪಾದಕರು, ಬ್ರಹ್ಮರ್ಷಿ ಬಾಳಶಾಸ್ತ್ರಿ ರಾವಜೀಶಾಸ್ತ್ರಿ ಕ್ಷೀರಸಾಗರ.

ಈ ಮಾಸಪತ್ರಿಕೆಯಲ್ಲಿ ಕನ್ನಡ ಮರಾಠಿ ಗುಜರಾತಿ ಭಾಷೆಗಳಲ್ಲಿ ಲೇಖನಗಳಿವೆ. ವಿಶ್ವಬ್ರಹ್ಮ ಸಮಾಜದ ಉನ್ನತಿಗಾಗಿ ಹೆಣಗುವ ಪತ್ರಿಕೆಯಿದು. ಇದರಲ್ಲಿ ಧಾರ್ಮಿಕ, ಸಾಮಾಜಿಕ ಮತ್ತು ಶಿಲ್ಪ ಶಾಸ್ತ್ರೀಯ ಲೇಖನಗಳು ಬರುತ್ತವೆ.

### ಕನ್ನಡ ನೀತಿ ಶತಕ (ಭತೃಹರಿ)

ಲೇಖಕರು ಮತ್ತು ಪ್ರಕಾಶಕರು:— ಎಂ. ಎಸ್. ಸುಬ್ಬಣ್ಣ, ಸರಸ್ವತೀ ಭಾಂಡಾರ, ಹೂವಿನ ಬಜಾರ ಬಲ್ಲಾರಿ. ಪುಟಗಳು ೧೮೦ ಬೆಲೆ ೪ ಆಣೆ.

ಭತೃಹರಿಯ ನೀತಿಯ ಶ್ಲೋಕಗಳನ್ನು ವಿವಿಧ ವೃತ್ತಗಳಲ್ಲಿ ಲೇಖಕರು ಕನ್ನಡಿಸಿದ್ದಾರೆ. ಪದ್ಯಗಳು ಅನ್ನಲು ಸುಗಮವಾಗಿವೆ. ಅರ್ಥಬೋಧೆಗೆ ಅನುಕೂಲವಾಗಲೆಂದು ಕೊನೆಗೆ ಕಠಿಣ ಶಬ್ದಗಳು ಕೆಲವಕ್ಕೆ ಅರ್ಥ ಕೊಡಲಾಗಿದೆ. ಭಾಷೆಯು ನಿರ್ದುಷ್ಟವಾಗಿದೆ. ಶೈಲಿ ಸುಖಾವಹವಿದೆ. ಸಂಗ್ರಹಯೋಗ್ಯ ಪದ್ಯಗಳು. ಲೇಖಕರದು ಪಳಗಿದಕೈ ಎಂದು ಧಾರಾಳವಾಗಿ ಹೇಳಬಹುದು.

### ಆರು ಕತೆಗಳು (೩ ನೆಯ ಆವೃತ್ತಿ)

ಸಂಪಾದಕರು:— ಪ್ಯಾಟಿ ಶಾಮರಾಯರು. ಪ್ರಕಾಶಕರು:— ಕಥಾಕುಂಜ ಗ್ರಂಥ ಭಾಂಡಾರ, ಗಣಪತಿ ಬೀದಿ, ಬೆಳಗಾವಿ. ಪುಟಗಳು ೧೧೬. ಬೆಲೆ ೧। ರೂ.

ನಾಮಾಂಕಿತ ಕತೆಗಾರರ ಆರು ಉತ್ತಮ ಕಥೆಗಳ ಸಂಗ್ರಹವಿದು. ಮುಂಬಯಿ ವಿದ್ಯಾ ಶಾಖೆಯವರು ತಮ್ಮ ಆಡಳಿತದ ಎಲ್ಲ ಶಾಲೆ ಕಾಲೇಜು ಪುಸ್ತಕಾಲಯಗಳಿಗೆ ಈ ಪುಸ್ತಕ ಮಂಜೂರ ಮಾಡಿದ್ದಾರೆ ಮೂರು ಸಲ ಮುದ್ರಣ ಕಂಡಿದೆಯೆಂದ ಮೇಲೆ ಇದು ತುಂಬ ಲೋಕಪ್ರಿಯವೆಂದು ತಾನೇ ವ್ಯಕ್ತವಾಗುವದು.

### Silver Jubilee Souvenir.

26th Annual Report Vaishya Vidyarthi Sangha, Mangalore.

ಮಂಗಳೂರಿನ ವೈಶ್ಯ ವಿದ್ಯಾರ್ಥಿ ಸಂಘದವರು ೨೬ ವರ್ಷ ಮಾಡಿದ ಕೆಲಸ ಅಮೋಘವಾಗಿದೆ. ಅದರ ಕುರುಹೆಂದು ಈ ರಜತೋತ್ಸವದ ವರದಿ ಪ್ರಕಟವಾಗಿದೆ. ಕನ್ನಡ ನಾಡಿನಲ್ಲಿದ್ದ ಈ ಸಂಸ್ಥೆಯ ವರದಿಯನ್ನು ಇಂಗ್ಲೀಷಿನಲ್ಲೇಕೆ ಕೊಟ್ಟರೊ ತಿಳಿಯದು. –ಆನೇ ಪುಟಕ್ಕೆ

# ವಿವಿಧ ಪ್ರಪಂಚ

## ಕಾರ್ಗೂಟಿ !

ಈಗಲೂ ಬ್ರಿಟನ್ನಿನಲ್ಲಿ Black Magic— ಮಾಟ ನೋಡಿ ಮಾಡುವವರಿದ್ದಾರೆಂದು ಡೇಗ್ಗ ಸ್‌ವಾರ್ತ್‌ರು ಬರೆಯುತ್ತಾರೆ. ಚರ್ಚುಗಳಲ್ಲಿ, ಖಾಸಗಿ ಮನೆಗಳಲ್ಲಿ ನಟ್ಟಿರುಳಿನಲ್ಲಿ ಇನ್ನೂ 'Black, Mass— ಕಾರ್ಗೂಟಿ ಇಲ್ಲವೆ ಕೃಷ್ಣ ಮೇಲ ಎಂಬ ಕ್ರಿಶ್ಚಿಯನ್ ಕಾಯಕ ನಡೆದೇ ನಡೆಯುತ್ತದೆ.

ಈ ೨೦ನೆಯ ಶತಮಾನದಲ್ಲಿ ಜ್ಞಾನ ಪ್ರಕಾಶ ಇಷ್ಟರ ಮಟ್ಟಿಗೆ ಆಗಿರುವಾಗಲೂ ಇಂತಹ ಭೂತ ವೈದ್ಯರು (ತಾಂತ್ರಿಕ ಮಾಂತ್ರಿಕರು) ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಿರುವುದು ಆಶ್ಚರ್ಯದ ಸಂಗತಿ. ಭಾರತದಲ್ಲಂತೂ ಕೇಳಬೇಕಾಗಿಯೇ ಇಲ್ಲ. ಹಳ್ಳಿಗೊಬ್ಬ ಜೋಯಿಸ ಹಾಜರಿದ್ದಾನೆ- ಈ ಕಾರ್ಯ ನಡೆಸಲು! ಯಂತ್ರ, ಮಂತ್ರ, ದರ್ಶನ ಆವೇಶಗಳಿಗೆ ಮರುಳಾಗದ ಜನರೇ ಇಲ್ಲಿ ವಿರಳ. ಎಂದ ಮೇಲೆ ಹೇಳುವದೇನು?

ವೈಜ್ಞಾನಿಕ ದೃಷ್ಟಿಯಿಂದ ಮಾಟಗಾರರು ಒಂದು ವಿಧದ ವಿಕಟ ಮತಿಗಳು (Neurotics) ಕಳ್ಳ ಸಾಧುಗಳು, ರಾವಣಸನ್ಯಾಸಿಗಳು! ಭಯ, ಲಜ್ಜೆ ಮತ್ತು ಇತರ ವಿಲಕ್ಷಣವಾದ ಸಾಮಾಜಿಕ ಕಾರಣಗಳಿಂದ ಕ್ರೂರ ಮನಸ್ಕರು Vows to the devil— ಭೂತಗಳ ಹೆಸರಿನಲ್ಲಿ ವ್ರತ ಹಿಡಿಯುತ್ತಾರೆ. ಆ ವ್ರತದ ಪೂರೈಕೆಯ ನೆವದಿಂದ ತಮ್ಮ ಮನಸ್ಸಿಗೆ ಬಂದ ದುಷ್ಕೃತ್ಯಗಳೆಲ್ಲವನ್ನು ಮಾಡಿ ಮುಗಿಸಿಬಿಡುತ್ತಾರೆ. ಈ ಉದ್ದೇಶ ಸಾಧನೆಗಾಗಿ ಅವರು ಹಿಂದಿನ ಯಜ್ಞಯಾಗಾದಿಗಳಿಂದ ಸ್ಫೂರ್ತಿ ಪಡೆಯುತ್ತಾರೆ.

'ಕಾರ್ಗೂಟಿ' ಎಂದರೆ, ಒಂದು ಭೂತೋತ್ಸವ. ಅದು ಮಾಟಗಾರರಿಗೆ ಸಂಬಂಧಿಸಿದ್ದು. ನಟ್ಟಿರುಳ ನಂತರ ಖಾಸಗಿ ಚರ್ಚಿನಲ್ಲಿ ಇಲ್ಲವೆ ಕ್ರಿಶ್ಚಿಯನ್ ಚರ್ಚಿನಲ್ಲಿ "ಮಾಟಗಾತಿ" "ಭೂತಪ್ಪ"ಗಳೆಂದು ಕರೆದುಕೊಳ್ಳುವ ಸ್ತ್ರೀ ಪುರುಷರು ಸಂಧಿಸುತ್ತಾರೆ. ಅವರು ವೇದಿಕೆಯ ಮೇಲೆ ಹಾಕುವ ಕುಡಿ ಪಂಚೆ ಇಲ್ಲವೆ ಶಿಲುಬೆ ಮುಂತಾದ ಧಾರ್ಮಿಕ ಚಿಹ್ನಗಳನ್ನು ತೆಗೆದುಕೊಂಡು ತಿರುಗ ಮುರುಗ ಹಿಡಿಯುತ್ತಾರೆ; ಮತ್ತು ಕಪ್ಪು ಮೇಣದ ಬತ್ತಿಗಳನ್ನು ಉರಿಸುತ್ತಾರೆ. ಒಬ್ಬ ಹೆಂಗಸನ್ನು ವೇದಿಕೆ (ದೇವರ ಜಗಲಿ)ಯ ಮೇಲೆ ಸಾಷ್ಟಾಂಗವಾಗಿ ಮಲಗಿಸುತ್ತಾರೆ. ಅನಂತರ ಒಂದು ಪ್ರಾಣಿಯನ್ನು ಕಡಿದು ಅದರ ರಕ್ತ ಅವಳ ಮೈಮೇಲೆ ಬೀಳುವಂತೆ ಮಾಡುತ್ತಾರೆ. ಆಗ ಆರಾಧಕರು "The devils Cross— ಭೂತದ (ದೆವ್ವದ) ಶಿಲುಬೆಯ ಗುರುತನ್ನು ಹೆಬ್ಬೆರಳಿನ ಸಹಾಯದಿಂದ ರಚಿಸುತ್ತಾರೆ.

ಕೆಲವೊಮ್ಮೆ 'ಕಾರ್ಗೂಟಿ'ಗಳಲ್ಲಿ ಮುದಿ ಮುದ್ದೆಯಾದ ತಿನಿಸುಗಳನ್ನು ತಿನ್ನುತ್ತಾರೆ; ಗಂಡಸರು ಕರಿಯ ಬಟ್ಟೆಯನ್ನುಟ್ಟು, ಮುಖಕ್ಕೆ ಕಪ್ಪು ಬಳಿದುಕೊಂಡು ತಲೆಯ ಮೇಲೆ ಕೊಂಬು (Horns)ಗಳನ್ನು ಧರಿಸಿಕೊಂಡು ತಮ್ಮ ಸಂಗಡಿಗರ ಬೆನ್ನಿಗೆ ಬೆನ್ನು ಕೊಟ್ಟುಕೊಂಡು ಒಮ್ಮೊಮ್ಮೆ ಅನಾಗರಿಕ ರೀತಿಯಿಂದ ಕುಣಿಯುವದೂ ಉಂಟು. ಅನೇಕ ವೇಳೆ ಅವರವರ ಅಕ್ಕತಂಗಿಯರು ಇಲ್ಲವೆ ತಾಯಂದಿರನ್ನು ಅಪರಿಚಿತರೆಂದು ಭಾವಿಸಿ ಸಂಗಡಿಗನ್ನಾಗಿ ತೆಗೆದುಕೊಳ್ಳುವರು. ಆ ಬಳಿಕ ಅವರ ತಂತ್ರಶಾಸ್ತ್ರದ ಮಂತ್ರ ಪಠನ ನಡೆದು ಆ ಸಮಾರಂಭವು ಒಂದು ಉನ್ಮತ್ತೋತ್ಸವದ ರೂಪಹೊಂದಿ ಕೊನೆಗೊಳ್ಳುತ್ತದೆ.

ಶತ್ರುಗಳಿಗೆ ಮಾಟ ಮಾಡುವ ಬಗೆ ಹೀಗಿದೆ: ಶತ್ರುವಿನ ಬೊಂಬೆಯನ್ನು ಮೇಣದಿಂದ ಮಾಡಿ ಅದರಲ್ಲಿ ಅವನದಕ್ಕೆ ಜೋಡಿಯಾದ ಒಂದು ಕೂದಲೆಳೆ ಇಲ್ಲವೆ ಉಗುರನ್ನು ಒತ್ತಿಬಿಡುವುದು. ಆ ಪ್ರತಿಮೆಯಲ್ಲಿ ಸೂಜಿ ಚುಚ್ಚುವದು, ಅದನ್ನು ಬೆಂಕಿಗೆ ಹಿಡಿದು ಕರಗಿಸುವದು ಇಲ್ಲವೆ ನದಿಯಲ್ಲಿ ಕೊಳೆದು ಕೊಚ್ಚಿ ನಾಶವಾಗುವಂತೆ ಮಾಡುವುದು. ಇದರಿಂದ ಶತ್ರುವು ನಾಶಹೊಂದುವನೆಂದು ನಂಬಿಗೆ.

ಈ ಮಾಟಗಾರಿಕೆ ವೇದಕ್ಕಿಂತ ಪುರಾತನವಾದುದು- ಸದೃಶ ಕಾರ್ಯಗಳು ತತ್ಸದೃಶ ಕಾರ್ಯಗಳನ್ನು ಘಟಿಸುತ್ತವೆಯೆಂಬುದೇ ಅದರ ಮೂಲಸೂತ್ರ. ಇದು ನಡೆಯುವುದು ಇದಕ್ಕೆ ಬಲಿಯಾಗುವವನಿಗೆ ಮೊದಲೇ ಇದರ ಪರಿಣಾಮ ತಿಳಿದಿದ್ದು ಅದರಿಂದ ಅವನ ಮನಸ್ಸು ಕದಡಿದ್ದರೆ ಮಾತ್ರ. ಮಾಟಗಾರರನ್ನು ಇತಿಹಾಸದಲ್ಲಿ ಆಗೀಗ ಹಿಡಿದು ಜೀವಸಹಿತ ಸುಟ್ಟಿದ್ದುಂಟು.

ಮಾಟಗಾರಿಕೆಗೊಂದು ಸುಪ್ರಸಿದ್ಧ ಉದಾಹರಣೆಯಿದೆ. ಹಿಂದೆ ಫ್ರಾನ್ಸಿನಲ್ಲಿ ೧೪ನೆಯ ಲೂಯಿಯೆಂಬ ಬಲಿಷ್ಠನಾದ ರಾಜನಿದ್ದನು. ಅವನನ್ನು ಒಲಿಸಿಕೊಳ್ಳಲು ಮೇಡಂ ಡಿ ಮಾಂಟೆಸ್ಪಾನ್ ಎಂಬಾಕೆ ಗಿಬಾರ್ಗನೆಂಬ ಮಾಟಗಾರನ ಮೂಲಕ ಮಾಟ ಮಾಡಿಸಿದಳು. ಅಲ್ಲಿಯ ಸುಪ್ರಸಿದ್ಧವಾದ ನಾಟ್ರೆ ಡೇಂ ಚರ್ಚಿಗೆ ಹೋಗಿ ವೇದಿಕೆಯ ಮೇಲೆ ಅವಳು ಮಲಗಿರಲು, ಒಂದು ಮಗುವನ್ನು ಕೊಂದು ಅದರ ನೆತ್ತರು ಅವಳ ಮೈಮೇಲೆ ಹನಿಯುವಂತೆ ಮಾಡಲಾಯಿತು. ಮೊದಮೊದಲು ಅದರಿಂದ ಅವಳ ಇಷ್ಟ ಕೈಗೂಡುವಂತೆ ತೋರಿತು. ಆದರೆ ಆ ಕತೆಯನ್ನು ರಾಜಸಭಾಸದರಿಂದ ತಿಳಿದೊಡನೆ ಲೂಯಿಯು ಅವಳನ್ನು ದೇಶಭ್ರಷ್ಟಮಾಡಿ ಮಾಟಗಾರನನ್ನು ಇತಿಹಾಸ ಪ್ರಸಿದ್ಧ ಬ್ಯಾಸ್ಟೈಲ್ ಸೆರೆಮನೆಗೆ ಕಳುಹಿಸಿದನು.

## ೨೦೦೦ ದೊಳಗೆ ಪಾಶ್ಚಾತ್ಯ ಕುಟುಂಬದ ನಾಶ!

ಕ್ರಿಸ್ತ ಶಕ ೨೦೦೦ ದೊಳಗೆ ಪಾಶ್ಚಾತ್ಯರ ಕುಟುಂಬ ಜೀವನವು ಸಂಪೂರ್ಣವಾಗಿ ನಾಶ ಹೊಂದಬಹುದೆಂದು ಕಾರ್ಲ್ ಸಿ. ಜಿಮ್ಮರ್ ಮನ್ನರು ಬರೆಯುತ್ತಾರೆ.

ಕ್ರಿಸ್ತ ಪೂರ್ವ ೪೫೦-೨೫೦ ರ ನಡುವೆ ಮೊದಲು ಕುಟುಂಬನಾಶವು ಗ್ರೀಸಿನಲ್ಲಿ ಒದಗಿತು. ೨ ನೆಯದು ಕ್ರಿಸ್ತ ಶಕ ೩೦೦-೫೫೦ ರ ನಡುವೆ ರೋಮಿನಲ್ಲಿ ಸಂಭವಿಸಿತು. ಕೆಲ ಯುಗಗಳಲ್ಲಿ ಗ್ರೀಕ ಮತ್ತು ರೋಮನ್ನರ ನೈತಿಕ ಅಧಃಪಾತ ತೀರ ಪಾತಾಳಕ್ಕಿಳಿದಿತ್ತು. ಸದ್ಯದಲ್ಲಿ ಪಾಶ್ಚಾತ್ಯರ ನೀತಿ ನಡತೆಗಳು ಅದಕ್ಕಿಂತ ಹೆಚ್ಚು ಕೆಳಗಿಳಿದಿವೆಯೆಂದು ಮೇಲಿನ ಗ್ರಂಥಕರ್ತರ ಅಭಿಪ್ರಾಯ. ಇನ್ನೂ ಅದು ಕೆಡಬಹುದೆಂದು ಅವರ ತರ್ಕ. ಕಡೆಯಲ್ಲಿ ಅಂದರೆ ಈ ಶತಮಾನದ ಅಂತ್ಯದೊಳಗಾಗಿ ತೀರ ಕೆಟ್ಟು ಕುಟುಂಬ ಜೀವನವೇ ಇಲ್ಲದಂತಾದೀತೆಂದೂ ಅವರು ಹೇಳುತ್ತಾರೆ. ಹೀಗೆನ್ನಲು ಕೌಟುಂಬಿಕರಲ್ಲಿ ಸದ್ಯ ಕಂಡುಬರುವ ವಿವಾಹ ವಿಚ್ಛೇದ, ಅಪತ್ಯಾಭಾವ, ಪರಸ್ಪರ ಅವಿಧೇಯತೆ ಅನೇಕರಿಗೆ ಸಂಸಾರ ಹೊರೆವುದರಲ್ಲಿ ಅನಿಚ್ಛೆ ಮುಂತಾದ ಲಕ್ಷಣಗಳೇ ಕಾರಣ ಈ ಗುಣಗಳು ಕುಟುಂಬದ ಸದಸ್ಯರಲ್ಲಿ ಬೆಳೆಯುತ್ತ ಹೋದರೆ ಕುಟುಂಬನಾಶ ಖಂಡಿತ.

ಮೇಲಿನ ಗುಣಗಳು ವೃದ್ಧಿ ಹೊಂದಲು ಬಡವಾದ ಸಾಮಾಜಿಕ ಸಂಬಂಧಗಳು, ಇಚ್ಛಾಪೂರ್ವಕವಾದ ಕರಾರು, ಒತ್ತಾಯ, ತಾತ್ಕಾಲಿಕ ಸ್ವಾರ್ಥ ಸಾಧನಾಸಕ್ತಿ, ಕುಟುಂಬಕ್ಕಾಗಿ ತ್ಯಾಗಮಾಡುವ ಬುದ್ಧಿಯ ಅಭಾವ ಇವೇ ಮೂಲ. ಈ ಕುಟುಂಬ ವಿರುದ್ಧ ಪ್ರವೃತ್ತಿಯನ್ನು ತಡೆಗಟ್ಟಲು ಶಕ್ತರಾದ ಸಮಾಜ ಸುಧಾರಕರು ಮುಂದೆ ಬಂದು ಕುಟುಂಬ ಜೀವನದ ಬೆಲೆಯನ್ನು, ಲಾಭವನ್ನು ವಿವರಿಸಿ ಸಾಮಾಜಿಕರಿಗೆ ತಿಳಿಸಿ ಸದ್ಯದ ಕೌಟುಂಬಿಕ ತೊಡಕುಗಳಿಗೆ ಕಾರಣಗಳನ್ನೂ ಅವುಗಳ ನಿವಾರಣೆಯನ್ನೂ ಸೂಚಿಸಿ ದಾರಿದೋರುವುದೊಂದು ಮಾರ್ಗ.

ಭಾರತೀಯರಿಗಿದೊಂದು ಪಾಠ. ಹಿಂದೆ ಸಂಯುಕ್ತ ಕುಟುಂಬ ಪದ್ಧತಿಯಿದ್ದ ನಾಡಿದು. ಅನಂತರ ಕ್ರಮೇಣ ವಿಭಕ್ತ ಕುಟುಂಬ ಜಾರಿಗೆ ಬಂದಿತು. ಈಗೀಗ ಪಾಶ್ಚಾತ್ಯರ ಮೇಲ್ಪಂಕ್ತಿಗೆ ಶರಣಾದ ಹಲವರು ಸ್ವಾತಂತ್ರ್ಯದ ಹೆಸರಿನಲ್ಲಿ ಸ್ವಚ್ಛಂದ್ಯವಿಹಾರವೆಂಬ ಘಾತಕತೆಯನ್ನು ಕಲಿಯುತ್ತಿದ್ದಾರೆ. ಮೇಲಿನ ಉದಾಹರಣೆಯಿಂದ ಮುಂಜಾಗ್ರತೆಗೆದುಕೊಂಡು ನಮ್ಮ ಸಮಾಜ ಸುಧಾರಕರು ಈ ಪ್ರವೃತ್ತಿಯನ್ನು ಈಗಿಂದಲೇ ತಡೆಗಟ್ಟಲುಯತ್ನಿಸ ಬೇಕು. ಇಲ್ಲದಿದ್ದರೆ ಕುಟುಂಬಘಾತಕರು ಸಮಾಜಘಾತಕರಾಗಿ ನಾಡನ್ನೆ ಅಸಂಸ್ಕೃತವನ್ನಾಗಿ ಮಾಡದಿರರು.

## ಕಪ್ಪು ಮೈಗೆ ರಾಮಬಾಣ!

ಒಬ್ಬಾಕೆ ಕರಿಯಮ್ಮನಿದ್ದರೆ. ಆಕೆಗೆ ಚೆಲುವನಾದ ಗಂಡ ಸಿಕ್ಕುವುದು ದುರ್ಲಭ; ಕಪ್ಪಿಯೆಂದು ಅವನು ಆಕೆಯನ್ನು ಬಿಟ್ಟು ಬಿಡುತ್ತಾನೆ. ಒಬ್ಬಾತ ಕರಿಯಪ್ಪನಿದ್ದರೆ ಆತನಿಗೆ ಚಲುವೆಯಾದ ಹೆಂಡತಿ ದೊರಕುವದು ದುರ್ಲಭ; ಆಕೆ ಅವನನ್ನು ಒಲ್ಲೆನೆನ್ನುತ್ತಾಳೆ. ಇದು ಲೋಕದ ಸಾಮಾನ್ಯ ರೂಢಿ. ವಿದ್ಯೆ, ಧನ, ಬಾಂಧವ್ಯ, ಪ್ರೀತಿ, ಒತ್ತಾಯ, ಅಜ್ಞಾನ ಮುಂತಾದವುಗಳಿಗೊಗಾಗಿ ಕುರೂಪಿ ಸುರೂಪಿಗಳ ನಡುವೆ ಎಷ್ಟೋ ಮದುವೆ ನಡೆದು ಹೋಗಿ ಬಿಡುತ್ತವೆನ್ನಿ. ಆದರೂ ಅದೊಂದು ನ್ಯೂನತೆಯಿಲ್ಲದಿದ್ದರೆ . .? ಎಂದು ದಂಪತಿಗಳಲ್ಲಿ ಕುರೂಪಿ ಎಣಿಸುವುದೊಂದು ಇದ್ದೇ ಇರುತ್ತದೆ. ಸುಂದರವಿಲ್ಲ, ಆದರೂ ಪರವಾಯಿಲ್ಲ ಎಂದು ಕೊಂಡೇ ಆಕೆ ಇಲ್ಲವೆ ಆತ ಬಾಳಬೇಕಾಗುತ್ತದೆ. ಅದಕ್ಕೀಗೊಂದು ರಾಮಬಾಣ ದೊರೆತಿದೆ. ಇತ್ತ ಕೇಳಿ —

ಪ್ಯಾರಿಸ್ಸಿನ ನ್ಯಾಶನಲ್ ಚಾಯಲೆಟ್ ಕಂಪನಿಯ ಡಿ. ಜೆ. ಸೀಲನ್‌ರು ಒಂದು ವಿಧದ Bleaching Cream- ವಿವರ್ಣಕ ಸಾರವನ್ನು ತಯಾರಿಸಿದ್ದಾರೆ. ಅದನ್ನು ೫೧ ನಿಗ್ರೋಗಳ ಮೇಲೆ ಪ್ರಯೋಗಿಸಿ ನೋಡಲಾಗಿದೆ. ಆ ಸಾರದಲ್ಲಿ ಅಮೋನಿಯಂ ಮಿಶ್ರಿತವಾದ ರಸದ ಮೂಲಾಂಶವನ್ನು ಬೆರೆಸಲಾಗಿದೆ. ಈ ಸಾರವನ್ನು ಆ ಪ್ರತಿಯೊಬ್ಬ ನೀಗ್ರೋವಿನ ಮೈಗೂ ಪ್ರತಿದಿನವೂ ೬ ವಾರಗಳವರೆಗೆ ಹಚ್ಚಿದ್ದರಿಂದ ಪ್ರತಿಯೊಬ್ಬನ ಚರ್ಮವೂ ೪॥ ರಿಂದ ೫॥ ವಿವರ್ಣಚ್ಛಾಯೆಗಿಳಿದಿತು. ಇನ್ನೊಂದು ಮಾತಿನಲ್ಲಿ ಹೇಳಬೇಕಾದರೆ ಅವರ ಮೈಗಪ್ಪು ನೂರಕ್ಕೆ ೬ ರಿಂದ ೮॥ ವರೆಗೆ ಕಡಿಮೆಯಾಯಿತೆನ್ನಬೇಕು— ಅಷ್ಟು ಪ್ರಮಾಣದಲ್ಲಿ ಮೈ ಬೆಳ್ಳಗಾಯಿತೆನ್ನಬೇಕು. ನೂರಕ್ಕೆ ೧೧ರಿಂದ ೧೩ರಷ್ಟಿರುವ ಸಾರ ಲೇಪನದಿಂದ ಎಂಥ ಕಪ್ಪು ಮೈಯೂ ಕಳ್ಳ ಮಟ್ಟಿಗೆ ತೆಳುಗಪ್ಪಾಗುತ್ತದೆ.

ಮೇಘಶ್ಯಾಮರಾಕೃತಿ ಮೇಲಿನ ಸುದ್ದಿಯಿಂದ ನೆಟ್ಟಗಾಗುವುದು ಸಹಜ. ಶ್ಯಾಮನು ಸ್ವಲ್ಪ ಕೆಂಪಗೆ ತಿರುಗಿದರೆ, ಮೊದಲು ಒಲ್ಲೆನೆಂದಾಕೆ ಅವನನ್ನು ವರಿಸಲೊಪ್ಪಿಯಾಳು. ನೀಲಮ್ಮ ಸ್ವಲ್ಪ ಬಣ್ಣದಲ್ಲಿ ಸುಧಾರಿಸಿದರೆ ಚೆಲುವನು "ನೀ-ಬಾರ ಕರ್ರಾನ ಕರಿಹುಡುಗಿ" ಎಂದು ಮದುವೆಯಾಗಲು ಕರೆದಾನು. ಆದರಿಲ್ಲೊಂದು ಮಾತನ್ನು ಹೇಳದಿರಲಾಗದು. ಬಾಹ್ಯ ಸೌಂದರ್ಯದಲ್ಲಿ ಬಣ್ಣವೊಂದು ಅಂಗ ಮಾತ್ರ. ಮುಖಾದಿ ದೇಹ ಭಾಗಗಳ ಸಮುಕಟ್ಟು, ಭಂಗಿ, ರೇಖಾವಿನ್ಯಾಸಾದಿಗಳೇ ಸೌಂದರ್ಯದ ಮೂಲಾಧಾರಗಳೆನಿಸುತ್ತವೆ. ವರ್ಣಗಳಿದ್ದರೆ ಸೌಂದರ್ಯ ಹೆಚ್ಚಾದೀತಲ್ಲದೆ ಅವುಗಳ ಅಭಾವ ಸೌಂದರ್ಯ ಮಾರಕವಾಗಲಾರದು. ಒಬ್ಬಾಕೆ "ಕಪ್ಪಿದ್ದರೂ ಲಕ್ಷಣವಂತೆ" ಎಂದು ಹೇಳುವ ಮಾತಿನ ಮೂಲ ಇಲ್ಲಿ ಅಡಗಿದೆ. ಆ ಲಕ್ಷಣಕ್ಕೆ ಹೊರಗಟ್ಟು ಮತ್ತು ಅಂತಃಸೌಂದರ್ಯಗಳೇ ಕಾರಣ.

ಗೌರಾಂಗರಲ್ಲದವರು (Inferiority complex) ಆತ್ಮಾಧಮ ಭಾವವನ್ನಿಟ್ಟುಕೊಳ್ಳಲು ಯಾವ ಕಾರಣವೂ ಇಲ್ಲ. Love at first sight ಪ್ರಥಮ ಸಂದರ್ಶನ ಜನ್ಯ ಪ್ರಣಯಕ್ಕೆ ಮಾತ್ರ ಕೃಷ್ಣೇತರ ವರ್ಣ ಸಹಕಾರಿಯಾಗಬಹುದು. ಆದರೆ ಸ್ಥಾಯಿ ಪ್ರೇಮಕ್ಕೆ ಅಂತಃಸೌಂದರ್ಯದ ಅರ್ಥಾತ್ ಹೃದಂತರಾಳದ ಶುದ್ಧ ಪ್ರೇಮವೇ ಆಧಾರ. ಅದರ ಮೇಲೆ, ಮೇಲೆ ಹೇಳಿದ ಅಂಗರಚನಾವಿನ್ಯಾಸದ ಭಾವಸೂಚಕ ಮತ್ತು ದೃಷ್ಟಿಪೇಯ ಲಕ್ಷಣಗಳಿದ್ದರೆ ಸಾಕು. ಬಣ್ಣದ ವ್ಯಾಮೋಹವಿದ್ದವರಿದ್ದರೆ (ಅದೂ ಕೆಲವೊಮ್ಮೆ ಅಗತ್ಯವೆನ್ನಿ) ಅವರು ಮೇಲೆ ಹೇಳಿದ ವಿವರ್ಣಕ ದುಗ್ಧಾಗ್ರವನ್ನು ತರಿಸಿಕೊಂಡು ಬಳಸಬಹುದು; ನೀಲೋತ್ಪಲದಲ ಶ್ಯಾಮೆಯರಾದ ಆಧುನಿಕ ವಿಜ್ಜಕೆಯರೂ ಕದಲೀಗರ್ಭಶ್ಯಾಮರಾದ ಅಭಿನವ ಪಂಪರೂ ಕೆಲ ಮಟ್ಟಿಗೆ ಬಾಳೆಯ ಸುಳಿಯ ಬಣ್ಣಕ್ಕೆ ಬಂದು ಮುಟ್ಟಬಹುದು!

## 'ಚಿಕ್ಕಪ್ಪ ದೊಡ್ಡಪ್ಪಂದಿರು'

'ಚಿಕ್ಕಪ್ಪ' ನೆಂದೊಡನೆ ಯಾರಾದರೂ ತಂದೆಯ ತಮ್ಮನೆಂದೂ 'ದೊಡ್ಡಪ್ಪ' ನೆಂದೊಡನೆ ಆವರ ಅಣ್ಣನೆಂದೂ ತಿಳಿದರೆ ಸದ್ಯದ ಸಂದರ್ಭದಲ್ಲಿ ತಪ್ಪಾಗುವದು.

ಚಿಕ್ಕಪ್ಪನೆಂದರಿಲ್ಲಿ ಲತಾಂಗ, ಚಿಕ್ಕಮ್ಮನೆಂದರೆ ಲತಾಂಗಿ— ದೊಡ್ಡಪ್ಪನೆಂದರೆ ಗಜೇಂದ್ರ, ದೊಡ್ಡಮ್ಮನೆಂದರೆ ಗಜಲಕ್ಷ್ಮಿ! ಈ ಎರಡು ವರ್ಗದ ಘನಸ್ಥರನ್ನು ಹೋಲಿಸಿದರೆ ಅನೇಕ ತಾರತಮ್ಯಗಳು ಕಂಡುಬರುತ್ತವೆ.

'ಕಡ್ಡಿ ಪೈಲವಾನ'ರಿಗೆ (ಅಂದರೆ ಚಿಕ್ಕ-ಅಪ್ಪ ಅಮ್ಮಂದಿರಿಗೆ) ಶ್ವಾಸಕೋಶಗಳು ದೊಡ್ಡದಾಗಿರುವುದರಿಂದ ಅವರಿಗೆ ಅಗತ್ಯಕ್ಕಿಂತ ಹೆಚ್ಚು ಆಮ್ಲಜನಕ ಸಿಕ್ಕಿ ಚೆನ್ನಾಗಿ ರಕ್ತ ಶುದ್ಧಿಯಾಗುವುದು; ಆದರೆ ಎಲ್ಲ ಉಸಿರೂ ಹೊರ ಹೊರಡದೆ ಉಳಿದು ಕೆಲವೊಮ್ಮೆ ಅವರು ಕ್ಷಯ ರೋಗಿಗಳಾಗಬಹುದು. 'ತಾಜಾ ಪೈಲವಾನ' ರಿಗೆ (ಅಂದರೆ ದೊಡ್ಡ-ಅಪ್ಪ ಅಮ್ಮಂದಿರಿಗೆ) ಈ ಭಯವಿಲ್ಲ. ಆದರೆ ಅವರು ಉಸಿರನ್ನು ಆಳವಾಗಿ ತೆಗೆದುಕೊಳ್ಳುವ ಅಭ್ಯಾಸವಿಲ್ಲದೆ ಬೇಕಾದಷ್ಟು ರಕ್ತ ಶುದ್ಧಿಯಾಗದೆ ತನ್ಮೂಲಕ ಅನೇಕ ಕಾಹಿಲೆಗಳಿಗೆ ತುತ್ತಾಗಬಹುದೆಂದು ಕ್ಲಿಂಡೆಸಿಂಗರು ಹೇಳುತ್ತಾರೆ.— ಕಡೆಯ ಪಕ್ಷ ಅವರ ಕೊಬ್ಬಾದರೂ ಮಿತಿ ಮೀರಿ ಬೆಳೆವಂತಾಗುವುದು!

ಲತಾಂಗರಿಗೆ ಹೃದಯ ತೋಲುತ್ತಿದ್ದು, ಉದ್ದವಾದ ಸ್ಥಿತಿಸ್ಥಾಪಕತ್ವವುಳ್ಳ ಅಯೋರ್ಟ (ಅತಿ ದೊಡ್ಡ ಶುದ್ಧ ರಕ್ತನಾಳ) ಇರುತ್ತದೆ. ಗಜಾಂಗರಿಗೆ ಹಾಗಲ್ಲ; ಕುಳ್ಳವೂ ಅಗಲವೂ ಆದ ಅಯೋರ್ಟವಿರುತ್ತದೆ. ಮೊದಲ ವರ್ಗದವರಿಗೆ ಹೃದ್ರೋಗ, ರಕ್ತ ರೋಗಾದಿಗಳು ಬರುವದು ವಿರಳ. ಯೌವನ ಕಳೆದರೆ, ಕ್ಷಯ ಹತ್ತದೆ ಉಳಿದರೆ, ಅವರು ಇಚ್ಛಾಮರಣಿಗಳಾಗಬಹುದು. ಕಡೆಯ ಪಕ್ಷ ನೂರಕ್ಕೆ ೬೦ ಜನ ತೆಳ್ಳನೆಯ ಮುದುಕರು ಹೀಗಿರುತ್ತಾರೆ. ೨ ನೆಯ ವರ್ಗದವರಿಗೆ ರಕ್ತನಾಳಕ್ಕೆ ಸಂಬಂಧಿಸಿದ ರೋಗಗಳುಂಟಾಗಬಹುದು, ರಕ್ತದ ಒತ್ತಡ ಹೆಚ್ಚಾಗಬಹುದು; ಭಾರ ವಿಪರೀತ ಏರಬಹುದು. ಹೃದಯಸ್ತಂಭಾದಿಗಳು ಉಂಟಾಗಬಹುದು!

ಬಳ್ಳಿಯೊಡಲವರ ಹೊಟ್ಟೆ ಉದ್ದವೂ ಮುಮ್ಮುಖವೂ ಆಗಿರುವುದರಿಂದ ಆಹಾರ ಬೇಗ ಕರುಳಿಗೆ ಹೋಗದೆ ಮಲಬದ್ಧತೆ ಮೊದಲಾದ ರೋಗಗಳುಂಟಾಗಬಹುದು. ಊಟವಾದ ನಂತರ ಹೊಟ್ಟೆ ಭಾರವೆನಿಸುವದು, ಮತ್ತು ವಾಯು ಮೇಲೆ ಬರುವುದು ಇವರಿಗೆ ಸಹಜ. ಇದರ ವಿರುದ್ಧವಾಗಿ ಆಲದೊಡಲವರಿಗೆ ಮಲಶೋಧ ಸರಿಯಾಗಿ, ಚೆನ್ನಾಗಿ ತಿಂದು ಕೊಬ್ಬಿರುತ್ತಾರೆ. ಈ ಸುಖದಿಂದ ಬೊಜ್ಜು ಬೆಳೆವುದಲ್ಲದೆ ಹೊಟ್ಟೆ ಶೂಲೆಯೂ ಉಂಟಾಗುವ ಸಂಭವವಿದೆ.

Light Weight Champions— ಲಘು ಪದಾರ್ಥವೆತ್ತುವವರಲ್ಲಿ ಅಗ್ರೇಸರರಾದವರು ಕೆಲಸದಲ್ಲಿ ಬಹು ಬೇಗ ಶ್ರಾಂತರಾಗುತ್ತಾರೆ; ಮಧ್ಯ ವಿಶ್ರಾಂತಿಯಿದ್ದರೆ, ಇವರು ಯಾವ ಕೆಲಸವನ್ನಾದರೂ ಮಾಡಿ ಮುಗಿಸಬಲ್ಲರು. ಸಾಮಾನ್ಯವಾಗಿ ಇವರ ಸಂಕಲ್ಪಗಳೆಲ್ಲ (ದರಿದ್ರಸ್ಯ ಮನೋರಥಂ) ಮನಸಿನ ಮುಂಡಿಗೆಯಾಗಿಯೇ ಉಳಿಯುವುವು. ಹಾಗಲ್ಲದೆ Heavy Weights — ಭೂಭಾರರು ನಿಶ್ಚಿಂತನಾಸ್ತಿಕರಾಗಿ ಬೇಕಾದ್ದನ್ನು ಮಾಡಿ ಉಂಡುಟ್ಟು (ಋಣಂ ಕೃತ್ವಾ ಘೃತಂ ಪಿಬೇತ್) ಭಾರ ಬೆಳೆಸುತ್ತ ಬೇಗ ಕೈಲಾಸ ಕಾಣುತ್ತಾರೆ!

ಈ ವರ್ಗದ್ವಯ ಪ್ರತಿನಿಧಿಗಳಲ್ಲಿ Lean and Hungry-looking— ತೆಳ್ಳಗಿನವರೂ ನರಿಯಣ್ಣನಂತೆ ಚತುರರೂ ಚಿಂತಾಸಕ್ತರೂ Il Penseroso— ಖಿನ್ನ ಮನಸ್ಕರೂ ಆಗಿದ್ದರೆ Fatmen- ದಪ್ಪಣ್ಣನಾಯಕರು ವಿಶ್ವಾಸ್ಯರೂ L'Allegro- ನಿಶ್ಚಿಂತರೂ ಉದಾಸೀನ ವೃತ್ತಿಯವರೂ ಆಗಿರುತ್ತಾರೆ. ಅವರಿವರ ಅಭಿರುಚಿಗಳೇ ಬೇರೆ; ಓದು, ಊಟ, ಉಡಿಗೆ, ಆಸಕ್ತಿಗಳೇ ಬೇರೆ. ಮೊದಲನೆಯವರು ಅನಾಗತ ವಿಧಾತರಿದ್ದರೆ, ೨ ನೆಯವರು ಯದ್ಭವಿಷ್ಯರಾಗಿರುತ್ತಾರೆ; ಮತ್ತು "ಸ್ನಾನಂ ವಾಪಿ ಪರಿತ್ಯಜ್ಯ ಭೋಜ್ಯಮೇವಾಭಿರಕ್ಷತು" ಎಂಬ ನಿಯಮದ ಭಕ್ತರಾಗಿರುತ್ತಾರೆ.

ವರ್ಗದ್ವಯದ ಪ್ರಕೃತಿ ಹದಕ್ಕೆ ಬರಲು ಸುಲಭೋಪಾಯವೆಂದರೆ ಪ್ರಾಣಾಯಾಮ. ಅದರಿಂದ ಅವರಿವರ ಲೋಪದೋಷಗಳು ಸುಧಾರಿಸುವುವು. ಪ್ರತಿನಿಧಿಗಳಿತ್ತ ಲಕ್ಷ್ಯ ಕೊಡುವರೆ?

# ಸಂಪಾದಕೀಯ ಟೀಕೆಟಿಪ್ಪಣಿಗಳು

## ಈಗಲೆ ಜಾಗ್ರತೆ ವಹಿಸಬೇಕು

ಜನಸಾಮಾನ್ಯರಿಗೆಲ್ಲ ಅನಿರ್ಬಂಧವಾಗಿ ಆಹಾರ ಧಾನ್ಯಗಳು ಸಿಕ್ಕಲೆಂದು ಹಿಂದುಸ್ತಾನ ಸರಕಾರದವರು ಆಹಾರ ಪದಾರ್ಥಗಳ ಮೇಲಿನ ನಿಯಂತ್ರಣವನ್ನು ರದ್ದುಪಡಿಸಿದರು. ಗಾಂಧೀಜಿ ಈ ಬಗ್ಗೆ ಬಹಳ ಆಗ್ರಹ ತಾಳಿದ್ದರೆಂಬುದು ಎಲ್ಲರ ನೆನಪಿನಲ್ಲಿರಲು ಸಾಕು. ನಿಯಂತ್ರಣ ರದ್ದುಪಡಿಸಿದ ತಿಂಗಳೊಪ್ಪತ್ತು ಧಾರಣೆಗಳು ಒಂದು ಬಗೆಯ ಸ್ಥಿರಮಿತದಲ್ಲಿದ್ದವು. ಹೀಗೆಯೆ ಅವು ಉಳಿದರೆ ಜನಸಾಮಾನ್ಯವೆಲ್ಲ ಯಾವದೇ ಬಗೆಯ ತೊಂದರೆಯಿಲ್ಲದೆ ಆಹಾರ ಪದಾರ್ಥಗಳನ್ನು ಪಡೆಯಬಲ್ಲುದು ಎಂದು ಎಣಿಸಲಾಗಿತ್ತು. ಹೀಗಾಗಬೇಕಾದರೆ ವ್ಯಾಪಾರಸ್ಥರ ಮತ್ತು ದಲ್ಲಾಳಿಗಳ ಸಹಾಯ ಸಹಕಾರ ಅತ್ಯವಶ್ಯವೆಂಬುದನ್ನು ಎಲ್ಲರೂ ನಿರೀಕ್ಷಿಸಿದ್ದರು, ಮುಖ್ಯವಾಗಿ ಅವರು ಲಾಭಬಡಕರಾಗಬಾರದೆಂದೂ ದೂರದ ವರೆಗೆ ಕಾಳುಗಳನ್ನು ಕಳಿಸುವ ಹವ್ಯಾಸಕ್ಕೆ ಬಿದ್ದು ಧಾರಣೆಯನ್ನು ಏರಿಸಬಾರದೆಂದೂ ಭಾವಿಸಲಾಗಿತ್ತು. ಆದರೆ ಜನತೆಯ ಆಸೆ ಆಕಾಂಕ್ಷೆಗಳೆಲ್ಲ ಮಣ್ಣುಪಾಲಾಗಿ ಧಾರಣೆಗಳು ಈಗಾಗಲೆ ಹೆಚ್ಚು ಪ್ರಮಾಣದಲ್ಲಿ ಏರಹತ್ತಿವೆ. ೧೩—೧೭ ರೂಪಾಯಿಗೆ ಚೀಲ ಇದ್ದ ಭತ್ತದ ಧಾರಣೆ ಈಗ ೨೫ ಕ್ಕೆ ಏರಿದ್ದು ಇನ್ನೂ ಏರಿಕೆಯಲ್ಲಿಯೇ ಇದೆಯೆಂದು ತೋರುತ್ತದೆ. ಜೋಳದ ಧಾರಣೆಯಾದರೂ ಇದೇ ಬಗೆಯಾಗಿ ಏರಿದೆ. ಅಕ್ಕಿ ಧಾರಣೆ ಏರಲಿಕ್ಕೆ ಮುಖ್ಯವಾಗಿ ಕಾಳು ಹೆಚ್ಚಾಗಿ ಹೊರಗೆ ಹೋದದ್ದೇ ಕಾರಣವೆಂದು ಹೇಳಬೇಕಾಗುವದು. ನಮ್ಮ ಧಾರವಾಡ ಜಿಲ್ಲೆಯ ಒಟ್ಟು ಉತ್ಪತ್ತಿಯಲ್ಲಿ ಈಗಾಗಲೆ ನೂರಕ್ಕೆ [illegible] ರಷ್ಟು ಹೊರಗೆ ಹೋಗಿದೆಯೆಂದು ತಿಳಿಯುತ್ತದೆ. ಮುಂಬಯಿ ಮತ್ತು ಪುಣೆ ನಗರಗಳು ಸೀದಾ ಪ್ರದೇಶವಾದ್ದರಿಂದ ಕಲ್ಯಾಣ ಮತ್ತು ಘೋರಪಡಿ ಮೊದಲಾದ ಹಿಂದಿನ ಸ್ಟೇಶನುಗಳಿಗೆ ಅಕ್ಕಿ ರವಾನಿಸಲ್ಪಟ್ಟದೆಂದೂ ಆದರೆ ಇದನ್ನೆಲ್ಲ ತರಿಸಿಕೊಂಡವರು ಮುಂಬಯಿ ಮತ್ತು ಪುಣೆಯವರೇ ಎಂದೂ ತಿಳಿದು ಬರುತ್ತದೆ. ಸಂಬಂಧಿಸಿದ ಅಧಿಕಾರಿಗಳು ಈ ಬಗ್ಗೆ ವಿಚಾರ ಮಾಡಿದರೆ ಎಲ್ಲವೂ ಸ್ಪಷ್ಟವಾಗುವದಲ್ಲಿ ಸಂದೇಹವಿಲ್ಲ. ಸೀದಾ ಪ್ರದೇಶದ ಸಮೀಪದ ಸೀದೇತರ ಸ್ಥಳದಲ್ಲಿ ಕಾಳಿನ ಸಂಗ್ರಹ ಮಾಡಿ ಅದನ್ನು ಕಳ್ಳತನದ ಸೀದಾ ಪ್ರದೇಶಗಳಿಗೆ ಹೇಗೆ ಕಳಿಸಬೇಕೆಂಬುದರ ರಹಸ್ಯವು ಕಳ್ಳಪೇಟೆ ಮಾಡುವವರಿಗೆ ಚೆನ್ನಾಗಿ ಗೊತ್ತಿದೆ. ಅಂತೆಯೇ ಅವರು ಕಲ್ಯಾಣ ಮೊದಲಾದ ಸ್ಟೇಶನುಗಳಿಗೆ ಹೇರಳವಾಗಿ ಅಕ್ಕಿಯನ್ನು ತರಿಸಿಕೊಂಡಿರಬಹುದು. ಕಲ್ಯಾಣಕ್ಕೆ ಹೆಚ್ಚು ಪ್ರಮಾಣದಲ್ಲಿ ಅಕ್ಕಿ ಹೋದದ್ದು ನಿಜವಾಗಿದ್ದರೆ ಆ ನಗರಕ್ಕೆ ಅಷ್ಟು ಅಕ್ಕಿ ಅವಶ್ಯವಿದೆಯೆ ಇಲ್ಲವೆ ಎಂಬುದನ್ನು ವಿಚಾರಿಸಬೇಕು. ಉದಾಹರಣೆಗಾಗಿಯೊಂದು ಇದನ್ನು ಬರೆಯಲಾಗಿದೆ. ಇದೇರೀತಿ ಉಳಿದ ಕಡೆಗಳಿಗೂ ಬೇರೆ ಬೇರೆ ಸ್ಥಳಗಳಿಂದ ಕಾಳು ಹೋದ ಸುದ್ದಿ ಒಂದೇಸವನೆ ಬರಹತ್ತಿದೆ. ಹೀಗೆ ಇಲ್ಲಿಂದ ಕಾಳು ಬಳದುಹೋದರೆ ಧಾರಣೆ ಹೆಚ್ಚುವದು ಇಷ್ಟೇ ಅಲ್ಲ ಮುಂದೆ ಇಲ್ಲಿಯೂ ಕಾಳಿನ ಕೊರತೆಯಾಗಬಹುದು. ಆದುದರಿಂದ ಸರಕಾರದವರು ಈಗಲೆ ಈ ಬಗೆಗೆ ದಕ್ಷತೆ ವಹಿಸಬೇಕು. ನಿಯಂತ್ರಣಾಜ್ಞೆ ರದ್ದುಪಡಿಸಿದ್ದರ ದುರುಪಯೋಗವಾದರೆ ಅದನ್ನು ಮತ್ತೆ ಹೇರುವ ಪ್ರಸಂಗ ಬರುವದೆಂದು ಸರಕಾರದವರು ಅಶ್ವಾಸಿಸಿದ್ದುಂಟು. ಆ ಪ್ರಸಂಗ ಬಾರದಂತೆ ನೋಡಿಕೊಳ್ಳುವದು ವ್ಯಾಪಾರಸ್ಥರ ಕರ್ತವ್ಯವಾಗಿದೆ; ಜನತೆ ತೀರ ಸಂಕಷ್ಟಕ್ಕೊಳಗಾಗಿ ಎಲ್ಲೆಲ್ಲಿಯೂ ಆಹಾರದ ಕೊರತೆಯಾಗುವ ವರೆಗೆ ದಾರಿಕಾಯದೆ ಮೊದಲೆ ಜನತೆಯ ಕಷ್ಟಗಳನ್ನು ನಿವಾರಿಸುವ ಉಪಾಯ ಯೋಜಿಸುವದು ಸರಕಾರದ ಕರ್ತವ್ಯವೆಂದು ಬೇರೆ ಹೇಳಬೇಕಿಲ್ಲ.

## ರೇಲ್ವೆ ವಿಸ್ತರಣೆ

ರೇಲ್ವೆ ವಿಸ್ತರಣೆಯ ಸಂಬಂಧದಲ್ಲಿ ಶ್ರೀಮಾನ್ ದಿವಾಕರ ರಂಗನಾಥರಾಯರು ಹಿರಿಯೋಲಗದಲ್ಲಿ ಮಂಡಿಸಿದ ಕಡಿತದ ಸೂಚನೆ ಮತ್ತು ಆ ಬಗ್ಗೆ ನಡೆದ ಚರ್ಚೆಯನ್ನು ಬೇರೆಕಡೆ ಕೊಟ್ಟಿದ್ದೇವೆ. ಹಿಂದುಸ್ತಾನದಲ್ಲಿ ಬ್ರಿಟಿಶ ಕಂಪನಿಯವರು ರೇಲ್ವೆ ಹಾಕಿದುದರ ಉದ್ದೇಶವು ಕೇವಲ ತಮ್ಮ ವ್ಯಾಪಾರ ಲಾಭದ ದೃಷ್ಟಿಯೇ ಆಗಿತ್ತೆಂಬುದು ಸ್ಪಷ್ಟವಾಗಿದೆ. ಅದರೀಗ ಬ್ರಿಟಿಶ ಸರಕಾರವು ಹೋಗಿ ಸ್ವತಂತ್ರ ರಾಷ್ಟ್ರೀಯ ಸರಕಾರ ಸ್ಥಾಪಿತವಾದ್ದರಿಂದ ಭಾರತದ ಸಾರ್ವಾಂಗೀಣ ಹಿತವನ್ನೆ ನು ಲಕ್ಷಿಸಿಯೇ ಇಲ್ಲಿನ ರೇಲ್ವೆಗಳ ವ್ಯವಸ್ಥೆ ಸಾಗಬೇಕು ಹೊಸ ರೇಲ್ವೆಗಳು ಹಾಕಲ್ಪಡಬೇಕೆಂಬುದು ನಿರ್ವಿವಾದವು ಇದೇ ವಿಷಯವನ್ನು ಶ್ರೀ ದಿವಾಕರರು ತಮ್ಮ ಭಾಷಣದಲ್ಲಿ ಪ್ರತಿಪಾದಿಸಿದರು. ಹಿಂದುಸ್ತಾನದ ಇತರ ಭಾಗಗಳಲ್ಲಿಗಿಂತ ದಕ್ಷಿಣ ಹಿಂದುಸ್ತಾನದ ಅದರಲ್ಲಿಯೂ ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳ ಭಾಗವು ಬಹಳ ಅಲಕ್ಷಿಸಲ್ಪಟ್ಟದೆಯೆಂಬುದು ವಿಷಾದಾಸ್ಪದವಾದುದು. [illegible]

ತ್ತಿನಬೀಡಾದ ಕರ್ನಾಟಕದ ಕರಾವಳಿ ಜಿಲ್ಲೆಗಳಿಗೆ ರೇಲ್ವೆ ಸೌಕರ್ಯವಿಲ್ಲದ್ದರಿಂದ ಅವುಗಳ ಪ್ರಗತಿಗೆ ಎಷ್ಟೊಂದು ಅಡ್ಡಿಯಾಗಿದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಭಟಕಳ, ನುಲ್ಕಿ, ಕಾರವಾರ, ಮಂಗಳೂರುಗಳಂಥ ಸ್ವಾಭಾವಿಕ ಬಂದರಗಳೂ ಅಲಕ್ಷಿಸಲ್ಪಟ್ಟು ಅಭಿವೃದ್ಧಿಗೊಳಿಸಲ್ಪಟ್ಟಿಲ್ಲ. ಅಲ್ಲದೆ ಇವುಗಳಿಗೆ ರೇಲ್ವೆಯ ಸೌಕರ್ಯವೂ ಇಲ್ಲ. ಹೀಗಾಗಿ ಕರ್ನಾಟಕದ ಇತರ ಭಾಗಗಳೊಡನೆ ನೇರವಾದ ಸಂಬಂಧವನ್ನಿಡಲಿಕ್ಕೂ ಇವುಗಳಿಗೆ ಅಡಚಣೆಯುಂಟಾಗಿದೆ. ಶ್ರೀ ದಿವಾಕರರ ಸೂಚನೆಗೆ ಬೆಂಬಲಕೊಡುತ್ತ ಶ್ರೀ ಎಸ್. ವಿ. ಕೃಷ್ಣಮೂರ್ತಿಯವರು ಈ ವಿಷಯವನ್ನು ಪ್ರತಿಪಾದಿಸಿದ್ದಾರೆ. ಮಂತ್ರಿಗಳು ಸಮಾಧಾನಕರ ಅಶ್ವಾಸನ ಕೊಟ್ಟದ್ದರಿಂದ ಶ್ರೀ ದಿವಾಕರರು ತಮ್ಮ ಸೂಚನೆಯನ್ನು ಹಿಂತೆಗೆದುಕೊಂಡರು. ಆದರೆ ಬರಿ ಅಶ್ವಾಸನದಿಂದ ಕಾರ್ಯ ಮುಗಿಯಿತೆಂದು ಮಂತ್ರಿಗಳು ಭಾವಿಸಲಾರರೆಂದು ನಮ್ಮ ನಂಬುಗೆ. ಆದಷ್ಟು ಬೇಗ ಈ ಯೋಜನೆಗಳನ್ನು ಕೈಕೊಂಡು ಕರಾವಳಿ ಪ್ರದೇಶವನ್ನು ಕರ್ನಾಟಕದ ಇತರ ಭಾಗಕ್ಕೆ ಜೋಡಿಸುವಂತೆ ಏರ್ಪಡಿಸಬೇಕೆಂದು [illegible]ಕ್ಷಿಸುತ್ತೇವೆ.

## ಸಂಸ್ಥಾನಗಳ ವಿಲೀನೀಕರಣ

ದಕ್ಷಿಣ ಸಂಸ್ಥಾನಗಳಲ್ಲಿ ೧೫ ಸಂಸ್ಥಾನಗಳು ಈಗ ಮುಂಬಯಿಪ್ರಾಂತದಲ್ಲಿ ವಿಲೀನವಾಗಿದ್ದು ಇದೇ ಮಾರ್ಚ ೧ ನೆಯ ತಾರೀಖಿನಿಂದ ಮುಂಬಯಿ ಸರಕಾರದ ಅಧಿಕಾರಿಗಳು ಇವುಗಳ ಅಧಿಕಾರವನ್ನು ವಹಿಸುವರು. ಲೀನವಾದ ಈ ಜಿಲ್ಲೆಗಳನ್ನೆಲ್ಲ ಒಂದು ಜಿಲ್ಲೆಯೆಂದು ಪರಿಗಣಿಸಲಾಗುವದು. ಆದರೆ ಸಂಸ್ಥಾನಗಳ ಹೊರಗಿರುವ ತಾಲೂಕುಗಳ ಆಡಳಿತಾಧಿಕಾರವನ್ನು ತಾತ್ಪೂರ್ತಿಕವಾಗಿ ಸಮೀಪದ ಜಿಲ್ಹಾಧಿಕಾರಿಗಳಿಗೆ ಒಪ್ಪಿಸಲಾಗುವದು, ಮುಂಬಯಿ ಪ್ರಾಂತದ ಕಾಯದೆಗಳನ್ನು ಅವಶ್ಯವೆನಿಸಿದಾಗ ಅನ್ವಯಿಸಲಾಗುವದಂತೆ. ಇನ್ನುಳಿದ ವಿಷಯಗಳನ್ನು ಸರಕಾರದವರು ಇನ್ನೂ ವಿಚಾರಿಸುತ್ತಿರುವರು. ಸಂಸ್ಥಾನಗಳನ್ನು ಇಂತು ವಿಲೀನಗೊಳಿಸಿದ್ದರ ಶ್ರೇಯಸ್ಸು ಬಹಳಮಟ್ಟಿಗೆ ಜಮಖಂಡಿಯ ತರುಣ ರಾಜಾಸಾಹೇಬರಿಗೆ ಮತ್ತು ಸಂಸ್ಥಾನ ಶಾಖೆಯ ಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರಿಗೆ ಸಲ್ಲುವದು. ಆಯಾ ಸಂಸ್ಥಾನಗಳನ್ನು ಸಮೀಪದ ಜಿಲ್ಲೆಗಳಲ್ಲಿ ತಾಲೂಕುಗಳನ್ನಾಗಿಯೂ ಇಲ್ಲವೆ ಹಲವು ತಾಲೂಕುಗಳನ್ನು ಕೂಡಿಸಿ ಪ್ರತ್ಯೇಕ ಜಿಲ್ಲೆಗಳನ್ನಾಗಿಯೂ ಮಾಡಿಆಡಳಿತವು ಸರಾಗವಾಗಿ ಸಾಗುವಂತೆ ನೋಡಿಕೊಳ್ಳಬೇಕು. ಈ ಸಂಬಂಧದಲ್ಲಿ ಅಲ್ಲಲ್ಲಿನ ಪ್ರಜೆಗಳ ಅಭಿಪ್ರಾಯವನ್ನು ತಿಳಿದುಕೊಳ್ಳುವದು ಅವಶ್ಯವಾಗಿದೆ. ಕ್ರಿಯಾ ಸಮಿತಿಯು ಈ ಸಂದರ್ಭದಲ್ಲಿ ಒಂದು ಉಪಸಮಿತಿಯನ್ನು ನೇಮಿಸಿದ್ದು ಆ ಉಪಸಮಿತಿಯವರೂ ಕೆಲ ಸೂಚನೆಗಳನ್ನು ಮಾಡಿರುವರು. ಇವನ್ನೆಲ್ಲ ವಿಚಾರಮಾಡಿ ಸರಕಾರದವರು ಕನ್ನಡಿಗರಿಗೆ ಅಷ್ಟೇ ಏಕೆ ಯಾರಿಗೂ ಯಾವದೇ ಬಗೆಯ ಅನ್ಯಾಯವಾಗದಂತೆ ಈ ಸಂಸ್ಥಾನ ಭಾಗಗಳ ಸೇರ್ಪಡೆ ಮಾಡಬೇಕೆಂದು ಆಗ್ರಹಪಡಿಸುತ್ತೇವೆ.

## ಕೊಲ್ಹಾಪುರದ ಭವಿತವ್ಯ

ಕೊಲ್ಹಾಪುರ ಸಂಸ್ಥಾನವೂ ಮುಂಬಯಿ ಪ್ರಾಂತದಲ್ಲಿ ವಿಲೀನಹೊಂದಿ ಉಳಿದ ಸಂಸ್ಥಾನಗಳೊಡನೆ ಸರ್ವವಿಧ ಪ್ರಗತಿಯನ್ನು ಪಡೆಯುವದು ಉಚಿತವಾಗಿದೆ. ಆದರೆ ಆ ಸಂಸ್ಥಾನವು ಸ್ವಾವಲಂಬಿಯಾಗಬಲ್ಲುದು, ಸ್ವಯಂ ಪ್ರಗತಿ ಪಡೆಯಲು ತಕ್ಕುದಾಗಿದೆ ಎಂದು ಮುಂತಾಗಿ ಹೇಳಲಾಗುತ್ತದೆ. ಅಲ್ಲಿಯ ಪ್ರಜಾಪರಿಷತ್ತಿನ ಕಾರ್ಯಕಾರೀ ಮಂಡಳದವರೂ ಸಭೆ ಸೇರಿ ಕೊಲ್ಹಾಪುರ ಸಂಸ್ಥಾನವು ವಿಲೀನ ಹೊಂದದೆ ಸ್ವತಂತ್ರವಾಗಿಯೇ ಇದ್ದುಕೊಂಡು ತನ್ನ ಪ್ರಗತಿಯನ್ನು ಸಾಧಿಸುವದು ಯುಕ್ತವೆಂದು ಅಭಿಪ್ರಾಯ ಪಡಲಾಗಿದೆ. ಪನ್ಹಾಳದಲ್ಲಿ ಮುಂದಿನ ತಿಂಗಳು ಪ್ರಜಾಪರಿಷತ್ತು ಸೇರುವದೆಂದೂ ಪ್ರಕಟಿಸಲಾಗಿದೆ. ಆ ಪರಿಷತ್ತಿನಲ್ಲಿಯೂ ಈ ವಿಷಯವು ಚರ್ಚಿಸಲ್ಪಟ್ಟು ನಿಶ್ಚಿತವಾದ ನಿರ್ಣಯವನ್ನು ಸ್ವೀಕರಿಸುವದು ಅವಶ್ಯವಾಗಿದೆ. ಇಂಥ ಮಹತ್ವದ ಪ್ರಶ್ನೆಯಲ್ಲಿ ಸಾರ್ವತ್ರಿಕ ಮತಗಣನೆ ತೆಗೆದುಕೊಂಡು ಇತ್ಯರ್ಥ ಮಾಡಿಕೊಳ್ಳುವದು ಇಷ್ಟವಾಗಿದೆ. ಸದ್ಯದ ಪರಿಸ್ಥಿತಿಯಲ್ಲಿ ಸಂಸ್ಥಾನಗಳನ್ನು ಹಾಗೆಯೆ ಇರಿಸುವದು ಎಷ್ಟರಮಟ್ಟಿಗೆ ಸಮಂಜಸವೆಂಬುದನ್ನು ವಿಚಾರಮಾಡುವದೂ ಅವಶ್ಯವಾ[illegible]

ಸರಕಾರವನ್ನು ಕೊಟ್ಟಬಳಿಕ ಹೊಸ ಪರಿಸ್ಥಿತಿಯಲ್ಲಿ ಅದೆಂತು ಕಾರ್ಯಕಾರಿಯಾಗುವುದೆಂಬುದನ್ನು ನೋಡುವದು ಅಪ್ರಸ್ತುತವಾಗಲಾರದು. ಸದ್ಯದ ಪರಿಸ್ಥಿತಿಯಲ್ಲಿ ಭಾರವಾದ ಆಡಳಿತ ವೆಚ್ಚವನ್ನು ವಹಿಸಿ ಸಂಸ್ಥಾನ ಪ್ರಗತಿಪರವಾಗುವಂತೆ ನೋಡಿಕೊಳ್ಳುವದು ಅವಶ್ಯವಾಗಿದೆ. ಹಾಗಾಗುವದು ಶಕ್ಯವಲ್ಲದಿದ್ದರೆ ಸಂಸ್ಥಾನವನ್ನೆಲ್ಲ ಒಕ್ಕೂಟ ಸರಕಾರದಲ್ಲಿ ವಿಲೀನಗೊಳಿಸುವದೇ ಇಷ್ಟವಾಗಿದೆ ಯಾವದೇ ಬಗೆಯ ಪೊಳ್ಳು ಅಭಿಮಾನಕ್ಕೆ ಒಳಗಾಗದೆ ಸಂಸ್ಥಾನ ಪ್ರಜೆಗಳು ನಿಜವಾದ ಹಿತ ಯಾವದರಿಂದ ಆಗಬಲ್ಲುದೆಂಬುದನ್ನು ಕಂಡರಿತು ಅದರಂತೆ ವರ್ತಿಸುವದು ಸಂಸ್ಥಾನಿಕರಿಗೂ ಸಂಸ್ಥಾನ ಪ್ರಜೆಗಳಿಗೂ ಭೂಷಣಾಸ್ಪದವಾಗಿದೆ.

## ಹೈದರಾಬಾದ ಎತ್ತ ಸಾಗಿದೆ ?

ಹೈದರಾಬಾದ ನಿಜಾಮ ಸರಕಾರದ ಆಡಳಿತವು ಸರಾಗವಾಗಿ ಸಾಗಿಲ್ಲೆಂದು ಅಲ್ಲಿನ ಹೊಣೆಗಾರ ಜನರ ಪ್ರಕಟನೆಯಿಂದ,ಸಂಸ್ಥಾನ ಕಾಂಗ್ರೆಸ ಸಮಿತಿ ಕಾಲ ಕಾಲಕ್ಕೆ ಪ್ರಕಟಿಸುತ್ತಿರುವ ವರದಿಗಳಿಂದ ಮತ್ತು ಹಿಂದುಸ್ತಾನದ ಹಿರಿಯೋಲಗದಲ್ಲಿ ಸಂಸ್ಥಾನ ಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರು ಕೊಟ್ಟ ಉತ್ತರದಿಂದ ಸ್ಪಷ್ಟವಾಗುವದು. ಹಿಂದುಸ್ತಾನಕ್ಕೆ ಸ್ವರಾಜ್ಯ ಸಿಕ್ಕ ಕೂಡಲೆ ಹೈದ್ರಾಬಾದ ನಿಜಾಮರು ತಮ್ಮ ಸಂಸ್ಥಾನದಲ್ಲಿ ಹೊಣೆಗಾರ ಸರಕಾರವನ್ನು ಸ್ಥಾಪಿಸಿ ಪ್ರಜೆಗಳ ಸಹಕಾರದಿಂದ ಆಡಳಿತವನ್ನು ಸಾಗಿಸುತ್ತ ಹಿಂದೀ ಒಕ್ಕೂಟದಲ್ಲಿ ಸೇರಿ ಪರರಾಷ್ಟ್ರ ಸಂಬಂಧ ಮೊದಲಾದ ವಿಷಯಗಳ ಸಂಬಂಧವನ್ನು ಬಿಡಿಸಿಕೊಳ್ಳಬಹುದಿತ್ತು. ಆದರೆ ಈ ಸೂಕ್ತವಾದ ಮಾರ್ಗವನ್ನು ಬಿಟ್ಟುಗೊಟ್ಟು ನಿಜಾಮ ಸರಕಾರವು ಹೊಣೆಗಾರ ಸರಕಾರವನ್ನಂತೂ ಕೊಟ್ಟಿಲ್ಲ;ತದ್ವಿರುದ್ಧ ದಬ್ಬಾಳಿಕೆಯ ಸತ್ರವನ್ನು ನಡೆಯಿಸಿದೆ. ಹಿಂದೀ ಒಕ್ಕೂಟವನ್ನು ಸೇರಿಲ್ಲ ಆದರೆ ಭಾರತ ಸರಕಾರದ ಗೂಡ ಒಂದು ವರುಷದ ವರೆಗೆ ಯಥಾಸ್ಥಿತಿ ಒಪ್ಪಂದವನ್ನು ಮಾಡಿಕೊಂಡಿದೆ. ಆದರೆ ಆ ಯಥಾಸ್ಥಿತಿ ಒಪ್ಪಂದವನ್ನು ಮುರಿಯಲಾಗಿದೆಂದು ಹಿರಿಯೋಲಗದಲ್ಲಿ ಸರದಾರ ವಲ್ಲಭಭಾಯಿರು ಹೇಳಿರುವರು ಸಂಸ್ಥಾನ ಕಾಂಗ್ರೆಸ್ ಮತ್ತು ನಿಜಾಮ ಸರಕಾರಗಳ ನಡುವೆ ಒಪ್ಪಂದದ ಮಾರ್ಗವು ಸುಗಮವಾಗುವಂತೆ ಪ್ರಯತ್ನಿಸಬೇಕೆಂದು ಶ್ರೀ ಗುಡಗುಂಟಿ ರಾಮಾಚಾರ್ಯರು ಒಂದು ಬಗೆಯಿಂದ ಸಹಕಾರಿಗಳ ಮನಸ್ಸು ಮೀರಿಯೂ ನಡುಗಾಲ ಸರಕಾರದಲ್ಲಿ ಸೇರಿದ್ದುಂಟು. ಅದರೀಗೆ ಅವರು ಅಲ್ಲಿನ ಅರಾಜಕತೆಗೆ ಬೇಸತ್ತು ತಮ್ಮ ಸ್ಥಳಕ್ಕೆ ರಾಜೀನಾಮೆ ಕೊಟ್ಟಿರುವರು. ಈ ಸಂಬಂಧದಲ್ಲಿ ಅವರು ಪ್ರಕಟನೆಯೊಂದನ್ನು ಹೊರಡಿಸಿರುವರು. ಇತ್ತೆಹಾದುಲ್ ಸಂಸ್ಥೆಯ ಪುಂಡಾಟಿಕೆಯ ಬಗ್ಗೆ ಯೂ ರಾಮಾಚಾರ್ಯರು ಈ ಪ್ರಕಟನೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ, ಹೈದರಾಬಾದ ಸರಕಾರದವರು ಯಥಾಸ್ಥಿತಿ ಒಪ್ಪಂದವನ್ನು ಮುರಿದದ್ದರ ಬಗ್ಗೆ ಭಾರತ ಸರಕಾರ ಜಬಾಬು ಕೇಳಿದೆ. ಹಿಂದುಸ್ತಾನ ಸರಕಾರದೊಡನೆ ಒಪ್ಪಂದದ ಬಗ್ಗೆ ಮಾತುಕತೆಯಾಡಲು ನಿಜಾಮರಿಂದ ಪ್ರತಿನಿಧಿಗಳು ಬಂದಿರುವರು ಎಂದೂ ಸರದಾರರು ಹೇಳಿ ಸಂಸ್ಥಾನದಲ್ಲಿ ಹೊಣೆಗಾರ ಸರಕಾರ ಸ್ಥಾಪಿತವಾಗುವವರೆಗೆ ಅಲ್ಲಿನ ಜನತೆಯಲ್ಲಿ ಅಶಾಂತಿ ಉಳಿಯುವದೇ ಎಂದೂ ಮತ್ತೊಂದು ಪ್ರಶ್ನೆಗೆ ಉತ್ತರಿಸಿರುವರು. ಸಂಸ್ಥಾನದಲ್ಲಿನಡೆದ ದಬ್ಬಾಳಿಕೆಯ ಬಗ್ಗೆಯಂತೂ ದಿನವೂ ಪತ್ರಿಕಗಳಲ್ಲಿ ಒಂದೇ ಸವನೆ ಸಂಗತಿಗಳು ಪ್ರಸಿದ್ಧವಾಗುತ್ತವೆ ಇವೆಲ್ಲ ನೋಡಿದರೆ ಹೈದರಾಬಾದ ಎತ್ತ ಸಾಗಿದೆಯೆಂದು ವಿಷಾದದಿಂದ ಕೇಳಬೇಕಾಗುವದು. ನಿಜಾಮ ಸರಕಾರದವರು ಈಗಲಾದರೂ ಪ್ರಜೆಗಳ ಬೇಡಿಕೆಯನ್ನು ಪೂರೈಸುವ ಧೋರಣ ವಹಿಸುವರೋ ?

## ಕಾಂಗ್ರೆಸ್ಸಿನ ಹೊಸ ಘಟನೆ

ಕಾಂಗ್ರೆಸ್ಸು ತನ್ನ ಧ್ಯೇಯವಾದ ಸ್ವಾತಂತ್ರ್ಯವನ್ನು ಸಂಪಾದಿಸಿದ್ದರಿಂದ ಇನ್ನು ಮೇಲೆ ಅದು ಅಸ್ತಿತ್ವದಲ್ಲಿರಬೇಕೊ ಇಲ್ಲವೆ ಅದನ್ನು ವಿಸರ್ಜಿಸಿ ಬಿಡಬೇಕೊ ಎಂಬ ಮಹತ್ವದ ಪ್ರಶ್ನೆಯು ದೇಶದ ಮುಂದೆ ಇದ್ದಿತು. ಆ ಬಗ್ಗೆ ಮಹಾತ್ಮಾ ಗಾಂಧಿಯವರೂ ಕಾಂಗ್ರೆಸ್ ವರಿಷ್ಠರೂ ಈ ಕೂಲಂಕಷವಾಗಿ ವಿಚಾರಮಾಡಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇದೀಗ ನೇಮಿಸಲ್ಪಟ್ಟ ಉಪಸಮಿತಿಯು ಸಿದ್ಧಪಡಿಸಿದ ಕಾಂಗ್ರೆಸ ಘಟನೆಯ ಕರಡನ್ನು ಸ್ವೀಕರಿಸಿ ಅದ ಕ್ಕೊಂದುಬಗೆಯ ಮುದ್ರೆಯನ್ನು ಒತ್ತಿದಿಟ್ಟದೆ. ಕಾಂಗ್ರೆಸ್ಸು ಈ ವರೆಗೆ ಮಾಡುತ್ತ ಬಂದ ದೇಶಸೇವೆಯನ್ನನುಲಕ್ಷಿಸಿ ಅದಕ್ಕೆ ಹೊಸ ಸ್ವರೂಪವನ್ನು ಕೊಡಲಾಗಿದೆ. ಈಗಿನಂತೆ ವರ್ಷಕ್ಕೆ ೪ ಆಣೆ ಕೊಡತಕ್ಕವರೆಲ್ಲ ಕಾಂಗ್ರೆಸ ಸದಸ್ಯರೆಂಬುದನ್ನು ತೆಗೆದುಹಾಕಿ ಕಾಂಗ್ರೆಸ್ಸಿನ ಸಾಮಾಜಿಕ ಆರ್ಥಿಕ ಹಾಗು ಸಾಂಸ್ಕೃತಿಕ ಧ್ಯೇಯವನ್ನು ಒಪ್ಪಿಕೊಳ್ಳುವ ೨೧ ವರ್ಷ ವಯಸ್ಸಿನ ತರುಣ ತರುಣಿಯರೆಲ್ಲರೂ ಮೂಲ ಕಾಂಗ್ರೆಸ ಪಂಚಾಯತವನ್ನು ಆರಿಸಲು ಮತಾಧಿಕಾರವನ್ನು ಪಡೆಯುವರು. ೫೦೦ ಜನರಿಗೆ ಒಬ್ಬ ಸದಸ್ಯನಂತೆ ಮೂಲ ಕಾಂಗ್ರೆಸ ಪಂಚಾಯತಕ್ಕೆ ಸದಸ್ಯರನ್ನು ಆರಿಸಲಾಗುವದು. ಇಂತಹ ಪಂಚಾಯತದ ಸದಸ್ಯರಾಗಬಯಸುವವರು ಮಾತ್ರ ಸತತ ಶುದ್ಧ ಕೈನೂಲಿನ ಕೈಮಗ್ಗದ ಖಾದೀಧಾರಿಗಳಾಗಿರಬೇಕು. ಮದ್ಯಪಾನ ಮಾಡುವವರಿರಬಾರದು. ಅಸ್ಪೃಶ್ಯತೆಯನ್ನು ಮನ್ನಿಸುವವರಿರಬಾರದು. ಜಾತಿ ಜಾತಿಗಳ ಸೌಹಾರ್ದದಲ್ಲಿ ನಂಬಿಗೆಯುಳ್ಳವರಾಗಿರಬೇಕು ಎಂದು ಹೇಳಲಾಗಿದೆ. ಹೀಗೆ ಆರಿಸಿ ಬಂದ ಪಂಚಾಯತ ಸದಸ್ಯರು ಕಾಂಗ್ರೆಸ ಪ್ರತಿನಿಧಿಗಳನ್ನಾರಿಸುವ ಮತದಾರರಾಗುವರು. ಕಾಂಗ್ರೆಸ ಪ್ರತಿನಿಧಿಗಳು ಪ್ರಾಂತಿಕ ಕಾಂಗ್ರೆಸ ಸಮಿತಿಯ, ಜಿಲ್ಹಾ ಕಾಂಗ್ರೆಸ ಹಾಗೂ ತಾಲೂಕ ಕಾಂಗ್ರೆಸಮಿತಿಯ ಸದಸ್ಯರಾಗುವರು. ಹೊಸ ಘಟನೆಯ ಸ್ವರೂಪವಿಂತಿದೆ. ಹೊಸ ಪರಿಸ್ಥಿತಿಗೆ ತಕ್ಕಂತೆ ಕಾಂಗ್ರೆಸನ್ನು ಕಾರ್ಯಕಾರೀ ಮಾಡಲು ಗಾಂಧೀಜಿಯ ಸಲಹೆಯಂತೆಯೆ ಕಾಂಗ್ರೆಸ ಘಟನೆಯಲ್ಲಿ ಇಂತು ಮಾರ್ಪಾಡು ಮಾಡಲಾಗಿದೆಯಂತೆ. ಕಾಂಗ್ರೆಸ್ಸಿನಲ್ಲಿ ಸದ್ಯಕ್ಕೆ ಮನೆಮಾಡಿಕೊಂಡ ಕೊಳೆಯನ್ನು ಹೋಗಲಾಡಿಸುವಲ್ಲಿ ಸದ್ಯದ ಘಟನೆ ಎಷ್ಟರಮಟ್ಟಿಗೆ ಸಮರ್ಥವಾಗಬಲ್ಲದೆಂಬುದು ಮುಂದೆಯೇ ಗೊತ್ತಾಗುವದು. ಕಾಂಗ್ರೆಸಿಗರು ತಮ್ಮ ಶೀಲವನ್ನು ತಿದ್ದಿಕೊಂಡು ಹೊಸ ಘಟನೆಯ ಮೂಲ ಉದ್ದೇಶವನ್ನು ಗಾಂಧೀಜಿಯ ಇಚ್ಛೆಯಂತೆ ಕಾರ್ಯಕಾರೀ ಮಾಡುವಲ್ಲಿ ಯಶಸ್ವಿಯಾಗಲೆಂದೇ ಈ ಸಮಯದಲ್ಲಿ ನಾವು ಹಾರಯಿಸುತ್ತೇವೆ.

## ಭಾಷಾನ್ವಯ ಪ್ರಾಂತರಚನೆ

ಹಿಂದುಸ್ತಾನದ ಹೊಸ ರಾಜ್ಯಘಟನೆಯನ್ನು ಸಿದ್ಧಪಡಿಸಲು ನೇಮಿಸಲ್ಪಟ್ಟ ಘಟನಾ ಸಮಿತಿಯ ಉಪಸಮಿತಿಯು ತನ್ನ ವರದಿಯ ಕರಡನ್ನು ಅಧ್ಯಕ್ಷರಿಗೆ ಒಪ್ಪಿಸಿದೆ. ಅದರ ಸಾರವನ್ನು ಇದೇ ಸಂಚಿಕೆಯಲ್ಲಿ ಬೇರೆ ಕಡೆಗೆ ಕೊಡಲಾಗಿದೆ. ಭಾಷಾನ್ವಯ ಪ್ರಾಂತರಚನೆಯ ತತ್ವಕ್ಕೆ ಈ ಉಪ ಸಮಿತಿಯು ಒಪ್ಪಿಗೆ ಕೊಟ್ಟಿದ್ದು ಈ ಬಗ್ಗೆ ಆಯಾ ಭಾಷಾನ್ವಯ ಪ್ರಾಂತರಚನೆಯ ಸಂಬಂಧದ ವಿಷಯದ ವಿಚಾರಮಾಡಲು ಒಂದು ಸಮಿತಿಯನ್ನು ನೇಮಿಸತಕ್ಕದ್ದೆಂದು ಸೂಚಿಸಿದೆ. ೧೯೪೯ನೆಯ ಇಸ್ವಿಯ ಆರಂಭದ ಮೊದಲು ಮತ್ತು ಹೊಸ ಘಟನೆ ಜಾರಿಯಲ್ಲಿ ಬರುವ ಮೊದಲೆ ಯಾವದಾದರೊಂದು ಹೊಸ ರಾಷ್ಟ್ರವನ್ನು ರಚಿಸಲು ಸೂಚಿಸಬಯಸುತ್ತಿದ್ದರೆ, ಹಾಗೆ ಮಾಡಲು ಅನುಕೂಲವಾಗುವಂತೆ ಸಕಾಲದಲ್ಲಿ ವರದಿ ಒಪ್ಪಿಸಲು ಈ ಸಮಿತಿಗೆ ಸಲಹೆ ಕೊಡಬೇಕೆಂದೂ ತಿಳಿಸಿದೆ. ಭಾಷಾನ್ವಯ ಪ್ರಾಂತರಚನೆಯಾಗದ್ದರಿಂದ ಅನೇಕ ಪ್ರಾಂತಗಳ ನೈಜವಾದ ಅಭಿವೃದ್ಧಿಗೆ ಎಷ್ಟೊಂದು ತಡೆಯುಂಟಾಗಿತ್ತೆಂಬುದು ಅನುಭವದ ಮಾತಾಗಿದೆ. ಅಂತೆಯೇ ಈ ಚಳವಳವು ಕಳೆದ ೨೫-೩೦ವರ್ಷಗಳಿಂದ ನಡೆದಿದೆ. ಕಾಂಗ್ರೆಸ್ಸು ಇದರ ಮಹತ್ವವನ್ನು, ಅವಶ್ಯಕತೆಯನ್ನು ಅರಿತು ತನ್ನ ಆಡಳಿತದಲ್ಲಿ ಸ್ವತಂತ್ರ ಪ್ರಾಂತವನ್ನು ರಚಿಸಿಕೊಂಡು ಬಿಟ್ಟಿತು. ಇದೀಗ ತನ್ನ ಕೈಯಲ್ಲಿಯೆ ಅಧಿಕಾರ ಬಂದಾಗ ತಾನು ಮೊದಲು ಕೊಟ್ಟ ಆಶ್ವಾಸನವನ್ನು ಕಾರ್ಯರೂಪದಲ್ಲಿ ತರಲು ಅದು ಪ್ರವೃತ್ತವಾಗುವದು ಅಸ್ವಾಭಾವಿಕವೇನು ಅಲ್ಲ. ಕಾಂಗ್ರೆಸ್ಸಿನ ಮತ್ತು ಭಾಷಾನ್ವಯ ಪ್ರಾಂತ ರಚನೆಯ ಪುರಸ್ಕರ್ತರ ಮತ್ತು ಘಟನಾ ಸಮಿತಿಯ ಅಭಿಪ್ರಾಯವನ್ನರಿತೇ ಉಪ ಸಮಿತಿಯವರು ತಮ್ಮ ಕರಡಿನಲ್ಲಿ ಈ ವಿಷಯವನ್ನು ಹಾಕಿ ಬಿಟ್ಟಿರುವರು. ಆಂಧ್ರ ಪ್ರಾಂತವನ್ನಷ್ಟೇ ಮೊದಲು ಪ್ರತ್ಯೇಕಿಸಲಾಗುವದು ಉಳಿದ ಪ್ರಾಂತಗಳ ಬಗ್ಗೆ ವಿಶೇಷ ಅಡಚಣೆಗಳಿವೆ ಅವುಗಳ ವಿಚಾರ ಹಿಂದುಗಡೆ ಮಾಡಲಾಗುವದೆಂದು ಮುಂತಾಗಿ ಹೇಳಲಾಗುತಿತ್ತು ಆದರೆ ಈ ಉಪಸಮಿತಿಯವರು ಆ ಬಗೆಯ ಅಭಿಪ್ರಾಯವನ್ನು ತಾಳದೆ ಎಲ್ಲ ಪ್ರಾಂತಗಳಿಗೂ ಸಮಾನವಾದ ನ್ಯಾಯ ದೊರೆವಂತೆ ಕರಡಿನಲ್ಲಿಯೆ ಈ ವಿಷಯವನ್ನು ಹಾಕಿಬಿಟ್ಟಿರುವರು. ಆಂಧ್ರವನ್ನಷ್ಟೇ ಮೊದಲು ಪ್ರತ್ಯೇಕಿಸಲಾಗುವದೆಂಬುದನ್ನು ಬದಿಗಿಟ್ಟು ಎಲ್ಲ ಪ್ರಾಂತಗಳನ್ನು ಸಮಾನ ದೃಷ್ಟಿಯಿಂದ ನೋಡುವ ಧೋರಣವನ್ನಿಟ್ಟುಕೊಂಡದ್ದಕ್ಕಾಗಿ ಸಮಿತಿಯವರು ಅಭಿನಂದ[illegible]

# ಅಂತರ್ರಾಷ್ಟ್ರೀಯ

## ಭದ್ರತಾ ಮಂಡಲದ ಕೀಳ್ನಡೆ

ಕಾಶ್ಮೀರದ ಪ್ರಶ್ನೆಯನ್ನು ಹಿಂದುಸ್ತಾನ ಸರಕಾರವು ಸಂ. ರಾ. ಸಂಘದ ಭದ್ರತಾ ಮಂಡಲಕ್ಕೊಯ್ದುದು ಸ್ಪಷ್ಟವಿದೆ. ಹಿಂದೀ ಪ್ರತಿನಿಧಿಗಳಾದ ಶ್ರೀ ಗೋಪಾಲಸ್ವಾಮಿ ಅಯ್ಯಂಗಾರ ಸಹಿತರಾದ ಮುಂತಾದವರು ಕೇವಲ ನಿಷ್ಪಕ್ಷಪಾತ ನ್ಯಾಯ ನಿಷ್ಠುರತೆಯಿಂದ ಪ್ರಶ್ನೆಯನ್ನು ಕಾಶ್ಮೀರದ ಮಿತಿಯಲ್ಲೇ ಇಟ್ಟು ಮಂಡಲದಿದಿರು ವಿವರಿಸಿದರೆ ಪಾಕಿಸ್ತಾನದ ಪ್ರತಿನಿಧಿಗಳು ಅಸಂಗತ ಸಂಗತಿಗಳನ್ನೆತ್ತಿ ಅಲ್ಲದ ಸಲ್ಲದ ಅನ್ಯಾಯ್ಯದ ಆರೋಪಗಳನ್ನು ಹಿಂದುಸ್ತಾನದ ಮೇಲೆ ಹೊರಿಸಿ ತಮ್ಮ ವೇ ಅದ ಟೇಂಕಾರ ಡಂಬರವನ್ನು ಪ್ರದರ್ಶಿಸಿದರೆಂಬುದು ಸುವಿದಿತವಿದೆ. ಈ ಭಾಷಣ (Barking) ವನ್ನು ದುರುಪಯೋಗಪಡಿಸಿಕೊಳ್ಳುವ ದೂರದೃಷ್ಟಿಯಿಂದ ಮಂಡಲದ ಸಭಿಕರು ಕಾಶ್ಮೀರ ಪ್ರಶ್ನೆಯೊಡನೆ ಅಸಂಬದ್ಧವಾದ ಪಾಕಿಸ್ತಾನಿ ಆರೋಪಗಳನ್ನು ಸೇರಿಸಿ ಎಲ್ಲವನ್ನೂ ಪರಿಶೀಲಿಸಲು ಮಂಡಲವು ಸಮಿತಿಯೊಂದನ್ನು ಇಲ್ಲಿಗೆ ಕಳುಹಬೇಕೆಂದು ತೀರ್ಮಾನಿಸಿದ್ದು ಮತ್ತು ಹೀಗೆ ಪಾಕಿಸ್ತಾನಗಳ ಆಕ್ರಮಣ ಶೀಲತೆಯನ್ನು ತಡೆಗಟ್ಟಲು ಯಾವ ಉಪಾಯವನ್ನೂ ಸೂಚಿಸದೆ ಕೇವಲ ಕಾಲಹರಣವಾಗುವಂಥ ಉದ್ಬುದ್ಧ ಪರಿಶೀಲನೆಯನ್ನು ಅಸಂಬದ್ಧ ಸಂಗತಿಗಳೊಡನೆ ಗಂಟು ಹಾಕಿದ್ದು ಹಿಂದುಸ್ತಾನ ಸರಕಾರದ ಮನಸ್ಸಿಗೆ ಬಂದಿಲ್ಲವೆಂಬುದೂ ಸುಪ್ರಸಿದ್ಧವಿದೆ. ಇದರಿಂದ ಲಂಡನ್ನಿನಲ್ಲಿ ಹಿಂದೀ ಸರಕಾರವು ಕಾಶ್ಮೀರದ ಪ್ರಶ್ನೆಯನ್ನು ಭದ್ರತಾ ಮಂಡಲದಿಂದ ಹಿಂತೆಗೆದುಕೊಳ್ಳುವುದೆಂದು ಊಹಾಪೋಹ ನಡೆದಿದೆ. ಸದ್ಯಕ್ಕಲ್ಲ ಈ ಊಹೆಗೆ ಆಧಾರ ಸಿಗದು. ಭದ್ರತಾ ಮಂಡಲ ಕೊಟ್ಟ ಮೇಲಿನ ತೀರ್ಪಿಗೆ ಭಾರತವು ಒಪ್ಪಿಗೆ ಕೊಡುವಾಗ ಕಾಶ್ಮೀರ ಪ್ರಶ್ನೆಯನ್ನು ಬೇರೆಯಾಗಿ ತೆಗೆದುಕೊಂಡು ಮೊದಲು ಬಗೆಹರಿಸಿದ ಬಳಿಕ ಉಳಿದವನ್ನು ಚರ್ಚೆಗೆ ತೆಗೆದುಕೊಳ್ಳಬೇಕೆಂಬ ಕರಾರು ಹಾಕಿದೆ. ಆದರೆ ಸಂದರ್ಭವನ್ನು ಅವಲೋಕಿಸಿದರೆ ಭದ್ರತಾ ಮಂಡಲದಲ್ಲಿ ನ್ಯಾಯಪರತೆಗಿಂತ ಹೆಚ್ಚಾಗಿ ಸಂಧಿ ಸಾಧಕತೆ ಹೆಚ್ಚಾಗಿದೆಯೆಂದೇ ತೋರುತ್ತದೆ. ಹಿಂದುಸ್ತಾನ ಪಾಕಿಸ್ತಾನಗಳ ಜಗಳದ ಲಾಭವನ್ನು ಯಾವುದಾದರೊಂದು ರೂಪದಿಂದ ಪಡೆಯಲು ಸಾಮ್ರಾಜ್ಯಶಾಹಿ ಬುದ್ಧಿಯ ಸದಸ್ಯರು ಹೊಂಚು ಹಾಕಿದಂತೆ ತೋರುತ್ತದೆ. ಆದರೆ ಹಿಂದೀ ಸರಕಾರ ಅಂಥ ಸಂಚು ಹೊಂಚುಗಳಿಗೆ ಬಲಿ ಬೀಳಲಾರದೆಂದು ಭರವಸೆಯಿದೆ.

ಎರಡನೆಯದಾಗಿ ಭದ್ರತಾ ಮಂಡಲವು ಪಾಲಿಸ್ತಾನವನ್ನು ವಿಭಜಿಸಬೇಕೆಂಬ ತೀರ್ಪನ್ನಿತ್ತುದು ಅವರ ಕಲ್ಪನೆಗೆ ಮೀರಿದ ಪರಿಣಾಮವನ್ನುಂಟು ಮಾಡಿದೆ. ಮೊನ್ನೆ ತಾ. ೨೨ ರಲ್ಲಿ ಬ್ರಿಟಿಶ ಸೈನಿಕರ ಮತ್ತು ಪೋಲೀಸರ ವೇಷದಲ್ಲಿದ್ದವರು ಹೊಡೆದುಕೊಂಡು ಹೋಗುತ್ತಿದ್ದ ೩ ಟ್ರಕ್ಕುಗಳು ಯೆಹೂದಿ ವ್ಯಾಪಾರ ಕೇಂದ್ರವಾದ ಬೆನ್ ಯೆಹುದಾ ಬೀದಿಯಲ್ಲಿ ಹೊಕ್ಕೊಡನೆ ಸ್ಫೋಟವಾದ್ದರಿಂದ, ೫೧ ಜನರು ಸತ್ತರೆಂದು ಯೆಹೂದಿಗಳೂ ೩೩ ರೇ ಜನರು ಮಡಿದರೆಂದೂ ಪೋಲೀಸರೂ ವರದಿ ಮಾಡುತ್ತಾರೆ. ಯೆಹೂದಿಗಳು ಇದರ ಸೇಡು ತೀರಿಸಿಕೊಳ್ಳಲು ಪ್ರತಿ ದಾಳಿ ಪ್ರಾರಂಭಿಸಿದ್ದು ಈ ವರೆಗೆ ೭ ಬ್ರಿಟಿಶ ಸೈನಿಕರು ಮತ್ತು ಇಬ್ಬರು ವೈಮಾನಿಕರು ಕೊಲ್ಲಲ್ಪಟ್ಟಿದ್ದಾರೆ; ಅಲ್ಲದೆ, ಮತ್ತೆ ೮ ಜನರಿಗೆ ಗಾಯವಾಗಿದೆ. ಬ್ರಿಟಿಶ ಸೈನಿಕರು ಹೈಫಾದಲ್ಲಿ ಅರಬರ ಮುದ್ದಿನ ಮನೆಗೆ ಮುತ್ತಿಗೆ ಹಾಕಿ ಇಬ್ಬರು ಸಶಸ್ತ್ರ ಅರಬರನ್ನು ಬಂಧಿಸಿ ಅವರಿಂದ ೨೦೦ ಸ್ಫೋಟಕಗಳನ್ನೂ ಇತರ ಶಸ್ತ್ರಾಸ್ತ್ರಗಳನ್ನೂ ವಶಪಡಿಸಿಕೊಂಡರು.

ಪ್ರತಿದಿನವೂ ಈ ತರಹದ ಅನಾಹುತಗಳು ನಡೆಯುತ್ತಲೇ ಇದ್ದು ಪಾಲಿಸ್ತಾನವಿಂದು ಅರಾಜಕತೆಯ ಆಗರವೆನಿಸಿದೆ. ಈ ಸಂದರ್ಭದಲ್ಲಿ ಅಮೇರಿಕವು ವಿಭಜನೆಯನ್ನು ಜಾರಿ ಮಾಡಲು ಸೈನಿಕರನ್ನು ಕಳುಹಲು ಸಿದ್ಧವಿಲ್ಲದ್ದನ್ನೂ ಅರಬ ರಾಷ್ಟ್ರಗಳು ವಿಭಜನೆಗೆ ವಿರುದ್ಧ ಧೋರಣ ತಳೆದದ್ದನ್ನೂ ಕಂಡು ಯೆಹೂದಿ ಧುರೀಣರು ಕೂಡಲೆ ವಿಭಜನೆಯ ಆಗ್ರಹ ಹಿಡಿಯಬಾರದೆಂದು ಮಾಡಿಕೊಂಡಿರುವುದಾಗಿ ಸುದ್ದಿಯಿದೆ. ನಾಳೆ ಭದ್ರತಾ ಮಂಡಲದಲ್ಲಿ ಅಮೇರಿಕದ ಪ್ರತಿನಿಧಿಯು ಅರಬ ಯೆಹೂದಿಗಳಲ್ಲಿ ಒಡಂಬಡಿಕೆಯ ಹೊಸ ಪ್ರಯತ್ನ ಮುಗಿಸುವರೆಗೆ ವಿಭಜನೆಯನ್ನು ತಡೆ ಹಿಡಿಯಬೇಕೆಂದು ಸೂಚಿಸುವನೆಂದು ತಿಳಿಯುತ್ತದೆ. ಬ್ರಿಟನ್ನು ಮಾತ್ರ ಮೇ ೧೫ ರಲ್ಲಿ ಸೈನ್ಯವನ್ನು ಹಿಂತೆಗೆದುಕೊಳ್ಳುವ ಧೋರಣವನ್ನು ಬದಲಿಸುವ ಸಂಭವವಿಲ್ಲ. ಆದರೆ ಅರಬ ಯೆಹೂದಿಗಳಲ್ಲಿ ಸಮಾಧಾನಕರ ಒಡಂಬಡಿಕೆಗಾಗಿ ಮಾಡುವ ಎಲ್ಲ ಪ್ರಯತ್ನವನ್ನೂ ಅದು ಸ್ವಾಗತಿಸುತ್ತದೆ.

ಸಂ. ರಾ. ಸಂಘದ ಪಾಲಿಸ್ತಾನ ಸಮಿತಿಯ

ಮೇಲಿನ ಸಂಗತಿಯಿಂದ ಭದ್ರತಾ ಮಂಡಲಕ್ಕೆ ಮಾನ ಉಳಿಸಿಕೊಳ್ಳಲು ಸದ್ಯ ಒಂದು ಅವಕಾಶ ಸಿಕ್ಕಂತಾಯಿತು. ವಿಭಜನೆಯನ್ನು ಅದುಲಿನಲ್ಲಿ ತರಬೇಕೆಂದು ಯೆಹೂದಿಗಳು ಒತ್ತಾಯಿಸಿದರೆ ನಾಳೆಯಾದರೂ ಅವರ ಮಾನ ಹೋಗುವಂಥದೇ. ಅಮೇರಿಕವು ಸೈನ್ಯವನ್ನು ಕಳುಹದಿದ್ದರೆ, ಬ್ರಿಟನ್ನು ತಣ್ಣಗೆ ಕುಳಿತರೆ, ಮತ್ತಾವ ರಾಷ್ಟ್ರವೂ ನೆರವೀಯಲು ಮುಂಬರದಿದ್ದರೆ— ಸ್ವಂತ ಸೈನ್ಯವಿಲ್ಲದ ಭದ್ರತಾ ಮಂಡಲವು ಹೆಸ್ಸೇಳಸುತ್ತ ಕೂತುಕೊಳ್ಳುವ ಪ್ರಸಂಗ ಬರುವುದು ಖಂಡಿತ. ಹೀಗೇ ಎಡಹುತ್ತ ತಡಹುತ್ತ ಎಷ್ಟು ಕಾಲ ಈ ಅಭದ್ರವಾದ ಭದ್ರತಾ ಮಂಡಲವು ಸಾಗೀತೆಂಬುದು ಸಹಜ ಸಂಶಯದ ಮಾತಾಗಿದೆ.

## ಕಾಮನವೆಲ್ತದಲ್ಲಿ ಭಾರತ ಉಳಿಯುವದೆ ?

ಮಹಾತ್ಮರ ಮರಣದಿಂದ ಲಂಡನ್ನಿನ ಶ್ವೇತ ಭವನದಲ್ಲಿ ಬ್ರಿಟನ್ ಹಿಂದುಸ್ತಾನಗಳ ನಡುವೆ ಮುಂದೆ ಎಂತಹ ಸಂಬಂಧ ಉಳಿಯಬಹುದೆಂಬ ಬಗ್ಗೆ ತರ್ಕ ವಿತರ್ಕ ನಡೆದಿದೆ. ಹಿಂದೀ ಮತ್ತು ಬ್ರಿಟಿಶ ಸರಕಾರಗಳಲ್ಲಿ ಮಹತ್ವದ ಚರ್ಚೆ ಕೆಲವು ದಿನಗಳಲ್ಲಿ ಪ್ರಾರಂಭವಾಗಲಿದೆಯೆಂದು 'ಸಂಯುಕ್ತ ಕರ್ನಾಟಕ'ದ ಲಂಡನ ಪ್ರತಿನಿಧಿ ಬರೆಯುತ್ತಾನೆ.

ಮೌಲಾನಾ ಆಜಾದರು ಈ ತಿಂಗಳ ಕೊನೆಯಲ್ಲಿ ಲಂಡನ್ನಿಗೆ ತೆರಳಲಿದ್ದಾರೆಂದೂ ಹಿಂದುಸ್ತಾನ ಬ್ರಿಟನ್ನುಗಳ ಕೊನೆಯ ಒಪ್ಪಂದದ ತಳಹದಿಯ ಮೇಲೆ ಮುಂದೆ ಎರಡೂ ಸರಕಾರಗಳ ಪರಿಷತ್ತು ಸೇರಲು ಅನುಕೂಲವಾಗುವದೆಂದೂ ತಿಳಿದುಬಂದಿದೆ.

ಸರದಾರ ಪಟೇಲರು ಬ್ರಿಟಿಶ ಕಾಮನವೆಲ್ತದಲ್ಲಿ ಹಿಂದುಸ್ತಾನ ಉಳಿಯಲು ಒಪ್ಪುವರೆಂದೂ ಈ ಬಗ್ಗೆ ಅವರು ತಮ್ಮ ಸಹಕಾರಿಗಳ ಮನವೊಲಿಸಲು ಪ್ರಯತ್ನ ನಡೆಸಿದ್ದಾರೆಂದೂ ಶ್ವೇತ ಭವನದ ಅಭಿಪ್ರಾಯವಿದೆ. ಅವರ ವಿರುದ್ಧ ಹೋಗದೆ ಪಂ. ನೆಹರು ಕೂಡ ಬ್ರಿಟಿಶ ಕಾಮನವೆಲ್ತದಲ್ಲಿ ಭಾರತ ಉಳಿಯುವದು ಈಗಿನ ಪ್ರಸಂಗದಲ್ಲಿ ಅನಿವಾರ್ಯವೆಂದು ಒಪ್ಪಬಹುದಾಗಿ ಭಾವಿಸಲಾಗಿದೆ.

ಕಾಮನವೆಲ್ತದಲ್ಲಿ ಹಿಂದುಸ್ತಾನ ಉಳಿಯುವಂತೆ ಮನವೊಲಿಸಲು ದಕ್ಷಿಣ ಆಫ್ರಿಕದ ಸಮಸ್ಯೆಯನ್ನು ಸಮಾಧಾನಕರವಾಗಿ ಬಿಡಿಸದೆ ಗತ್ಯಂತರವಿಲ್ಲೆಂದು ಲಂಡನ್ನಿನ ರಾಜಕೀಯ ವರ್ಗದವರ ಅಭಿಪ್ರಾಯವಾಗಿದೆ. ಈಗಾಗಲೆ ಪಂಡಿತರೊಡನೆ ಜನರಲ್ ಸ್ಮಟ್ಸರು ಪತ್ರವ್ಯವಹಾರ ನಡೆಸಿದ್ದಾರೆಂದೂ ಆದರೂ ಈ ಪತ್ರವ್ಯವಹಾರದಿಂದ ರಾಷ್ಟ್ರದ್ವಯದ ಮತಭೇದ ಅಳಿಯಲಿಲ್ಲೆಂದೂ ತಿಳಿಯುತ್ತದೆ. ಬ್ರಿ. ಕಾಮನವೆಲ್ತದಲ್ಲಿ ಭಾರತ ಇರಬೇಕಾದರೆ ಈ ಪ್ರಶ್ನೆ ಮೊದಲು ಬಗೆಹರಿಯಬೇಕೆಂದು ಪಂಡಿತರು ಅಭಿಪ್ರಾಯಪಟ್ಟಿದ್ದಾರೆಂದು ಗೊತ್ತಾಗಿದೆ.

ಉಳಿದ ವಸಾಹತು ಸರಕಾರಗಳು ಮಾರ್ಶಲ್ ಸ್ಮಟ್ಸರಿಗೆ ಹಿಂದುಸ್ತಾನದೊಡನೆ ಒಪ್ಪಂದ ಮಾಡಿಕೊಳ್ಳಬೇಕೆಂದು ಬಿನ್ನಹ ಮಾಡಿಕೊಂಡದ್ದುಂಟೆಂದು ಲಂಡನ ಪ್ರತಿನಿಧಿಗೆ ತಿಳಿದಿದೆಯಂತೆ. ಲಂಡನ್ನಿನಲ್ಲಿ ವಸಾಹತು ಮುಖ್ಯ ಮಂತ್ರಿಗಳ ಪರಿಷತ್ತು ಸೇರಿದಾಗ ಅಸ್ಟ್ರೇಲಿಯದ ಮುಖ್ಯ ಮಂತ್ರಿಗಳಾದ ಡಾ. ಇವ್ಹ್ಯಾಟರು ಹಿಂದುಸ್ತಾನವನ್ನು ಕಾಮನವೆಲ್ತದಲ್ಲಿ ಉಳಿಸಿಕೊಳ್ಳಬೇಕೆಂದಿದ್ದಾರೆ. ದ. ಆಫ್ರಿಕವು ತನ್ನ ಹಟವನ್ನು ಬಿಟ್ಟುಕೊಟ್ಟು ಉದಾರನೀತಿ ವಹಿಸಬೇಕೆಂದು ಸ್ಮಟ್ಸರಿಗೆ ತಿಳಿಸಿ ಹೇಳಿದರೂ ಅವರು ಅದಕ್ಕೆ ಲಕ್ಷ್ಯ ಕೊಡಲಿಲ್ಲವೆಂದು ಸುದ್ದಿ.

ಸ್ಮಟ್ಸರ ಹಠತ್ವವು ಬ್ರಿಟನ್ನಿನ ಒತ್ತಾಯದ ಭಾರವನ್ನು ಬಹುಶಃ ತಡೆಯಲಾರದು. ಶಂಖದಿಂದ ಬಂದರೆ ಮಾತ್ರ ತೀರ್ಥ, ಅತ್ತಿಗೆ ಕಿವಿ ಹಿಂಡಿದರೆ ಮಾತ್ರ ಅಣ್ಣನ ಸಂಗೀತ ನೆಟ್ಟಗೆ ಸಾಗೀತು—ಎನ್ನಬೇಕಲ್ಲವೆ ಈ ಸಂದರ್ಭದಲ್ಲಿ? ಜನರೆಲ್ಲರ ಛಲದಂಕಮಲ್ಲತನವು ಕೊನೆಗಾದರೂ ಮಣಿಯದೆ ಹೋಗದೆಂದು ಪರಿಸ್ಥಿತಿಯ ಅವಲೋಕನದಿಂದ ತರ್ಕಿಸಬಹುದಾಗಿದೆ; ಭಾರತವಾದರೂ ಸಂದರ್ಭ ಸನ್ನಿಕ್ಷೆಯಿಂದ ಬ್ರಿ. ಕಾಮನವೆಲ್ತದಲ್ಲಿ ನಿಲ್ಲುವ ಸಂಭವವೇ ಹೆಚ್ಚೆಂದು ಹೇಳಬಹುದಾಗಿದೆ.

## ಬಣ್ಣದವರ ಭವಣೆ

ಬ್ರಿಟನ್ನಿನಲ್ಲಿಂದು ದುಡಿಯುವವರು ಬಹಳ ಕಡಿಮೆಯಾಗಿದ್ದಾರೆ. ಇದನ್ನು ನೋಡಿ ವಸಾಹತು ಗಳಲಿಯ ಬಣ್ಣವರ್ಣರು ನೆರವಾಗಿರೆ ಸಾಡಾದ ನೋಡುವುದೇನು? ವರ್ಣದ್ವೇಷ! ಕೆಲಸವಿದ್ದರೂ ಬಿಳಿಯರಲ್ಲದವರಿಗೆ ಕೆಲಸ ಕೊಡರು.

ಹಾಗೆ ಕೆಲಸ ಹುಡುಕಿಕೊಂಡು ಹೋದವರಲ್ಲಿ ಬಹಳ ಜನರು ಹಾಂಕಾಂಗ್, ಪಶ್ಚಿಮ ಆಫ್ರಿಕ ಮತ್ತು ಪಶ್ಚಿಮ ಇಂಡಿಯ ದ್ವೀಪಸಮೂಹದವರಾಗಿದ್ದಾರೆ. ಅವರಲ್ಲಿ ಹಲವರು ತಿಕೀಟಿಲ್ಲದ ಪ್ರಯಾಣದಿಂದ ಬಂದವರು, ಮಿಕ್ಕವರು ತಿಕೀಟಿಗೆ ಮಾತ್ರ ಹಣವಿದ್ದವರು, ಮತ್ತಿನವರು ಯುದ್ಧನಿವೃತ್ತ ಸೈನಿಕರು.

ಬಣ್ಣಗರ ಬೆಂಬಲಿಗರಾದ ರೆವರೆಂಡ್ ಇ. ಏ. ಆರ್ವಿನ್ ಅವರ ಪ್ರಕಾರ ಕುಲಭೇದವನ್ನು ಆಧರಿಸಿ ಇಂಗ್ಲಂಡಿನಲ್ಲಿ ಬಣ್ಣದ ಜನಗಳಿಗೆ ಕೆಲಸಕೊಡುತ್ತಿಲ್ಲವೆಂಬುದು ತಿಳಿಯುತ್ತದೆ. ವಸಾಹತು ಕಾರ್ಯಾಲಯದ ವಕ್ತಾರನೊಬ್ಬ ಹೇಳುತ್ತಾನೆ. ಬಣ್ಣಗರಿಗೆ ಕೆಲಸದ ಜಾಣ್ಮೆಯಿಲ್ಲದ್ದೇ ಕೆಲಸ ಸಿಗದುದರ ಕಾರಣ ಎಂದು. ರೆವೆರೆಂಡರ ಮಾತಿನಲ್ಲಿ ಎಳ್ಳಷ್ಟೂ ಸತ್ಯವಿಲ್ಲವೆನ್ನಲು ಸಾಧ್ಯವೆ? ಇಂಗ್ಲಂಡಿನಲ್ಲಿ ಹುಟ್ಟುವಾಗಲೇ ಎಲ್ಲರೂ Skilled Labourers. ಜಾಣ ಕೆಲಸಿಗರಾಗಿ ಹುಟ್ಟುವರೆ? ಇದು ಬರಿಯ ಬಣ್ಣದ ಮಾತೆಂಬುದು ಇದರಿಂದ ಸ್ಪಷ್ಟವಾಗುವುದಿಲ್ಲವೆ? ಆದರಲ್ಲಿ ಬೇರೆ ನಮ್ಮ ವಿದ್ಯಾರ್ಥಿಗಳೂ ವ್ಯಾಪಾರಿಗಳೂ ಆಗಾಗ ಇಂಗ್ಲಂಡಿನಲ್ಲಿ ತಮ್ಮನ್ನು ಅಸ್ಪೃಶ್ಯರಂತೆ ಕಂಡ ಕತೆಗಳನ್ನು ಇಲ್ಲಿಗೆ ಬರೆದಿದ್ದಾರೆ. ಇಷ್ಟು ಗೊತ್ತಿರುವಾಗ ವಸಾಹತು ಕಾರ್ಯಾಲಯದವನ ಮಾತನ್ನು ಹೇಗೆ ನಂಬೋಣ? ಬಿಳಿಯರ ಕಾರಭಾರದಿಂದಲೇ ಜಗತ್ತು ನಡೆಯಬೇಕೆ? ಅವರು ಕಣ್ಣು ತೆರೆಯದಿದ್ದರೆ ಹಾಗೆಮಾಡುವಂತೆ ಮಾಡುವುದು ಬಣ್ಣದವರ ಪಾಲಿಗೆ ಸೇರಿದ್ದು. ಬಣ್ಣಗರು ಈಗಲಾದರೂ ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಈ ಸಮಸ್ಯಾ ಪರಿಹಾರಕ್ಕೆ ಅಧಿಕೃತ ವ್ಯಕ್ತಿಗಳೊಡನೆ ವ್ಯವಹರಿಸುವರೆ?

## ರಶಿಯದ ಮಧ್ಯಸ್ಥಿಕೆ ?

ಮಂಚೂರಿಯದ ರಾಜಧಾನಿಗೆ ೬೦ ಮೈಲು ದೂರದಲ್ಲಿರುವ ಅಂಷಾನ್ ಎಂಬ ಉಕ್ಕಿನ ಕೇಂದ್ರವನ್ನು ಕಮ್ಯುನಿಸ್ಟ ಸೈನಿಕರು ವಶಪಡಿಸಿಕೊಂಡಿದ್ದಾರೆ. ಇತ್ತ ೧೩೦ ಮೈಲು ಪಶ್ಚಿಮದಲ್ಲಿ ಚಂಚೌ ಎಂಬ ದುರ್ಗಕ್ಕಾಗಿ ಕಮ್ಯುನಿಸ್ಟರು ಕಲಿತನದಿಂದ ಕಾದುತ್ತಿದ್ದಾರೆ. ಈ ಪ್ರದೇಶದಲ್ಲಿಯೆ ಚಿಯಾಂಗರು ಅಸಂಖ್ಯ ಸೈನಿಕರನ್ನಿಟ್ಟಿರುವುದರಿಂದ ಇಲ್ಲಿಯ ಕದನ ಬಹಳ ದಿನಗಳ ವರೆಗೆ ನಡೆಯಲಿದೆ.

ಮತ್ತೊಂದು ಸಂಗತಿ: ಚೀನದ ಯಾದವೀ ಯುದ್ಧದಲ್ಲಿ ಮಧ್ಯಸ್ಥಿಕೆ ವಹಿಸಲು ರಶಿಯವು ಮುಂದೆ ಬಂದಿದೆಯೆಂದು ಹರಡಿದ ಸುದ್ದಿಗೆ ಇದುವರೆಗೆ ಅಧಿಕಾರಿ ವರ್ಗಗಳಿಂದ ಪುಷ್ಟಿ ದೊರೆತಿಲ್ಲ.

ಒಂದು ವೇಳೆ ರಶಿಯವು ಹಾಗೆ ಮುಂದೆ ಬಂದರೂ ಅದರ ಮಧ್ಯಸ್ಥಿಕೆಗೆ ಯಾರೂ ಒಪ್ಪರೆಂದು ಬಲ್ಲವರ ಹೇಳಿಕೆ. ಅಮೇರಿಕದ ರಾಯಭಾರಿಗಳಾದ ಡಾ. ಸ್ಟುವರ್ಟರು ಸೂಚಿಸಿದಂತೆ ಕಮ್ಯುನಿಸ್ಟ ಮತ್ತು ಚಿಯಾಂಗ್ ಪಕ್ಷಗಳೊಳಗೆ ಮಾತುಕತೆಗಳು ಪ್ರಾರಂಭವಾಗುವ ಲಕ್ಷಣವಿಲ್ಲವೆಂದೂ ಹೇಳಲಾಗುತ್ತಿದೆ. "ಕಮ್ಯುನಿಸ್ಟರನ್ನು ಬಂಡುಗಾರರನ್ನಾಗಿ ಪರಿಗಣಿಸುತ್ತಿರುವುದರಿಂದ ಇನ್ನು ಅವರೊಡನೆ ಮಾತುಕತೆ ನಡೆಸುವುದು ಹಳೆಯ ಮಾತಾಯಿತು" ಎಂದು ವಾದಿಸಲಾಗುತ್ತಿದೆ.

ಅಮೇರಿಕವಿಂದು ತನಗೆ ನೆರವಾಗಿರುವದರಿಂದ ಚಿಯಾಂಗ್ ಸರಕಾರಕ್ಕೆ ಸಂಧಾನ ಪ್ರಾರಂಭಿಸುವ ಪ್ರಸಂಗವೇ ಇಲ್ಲವೆಂದು ಮತ್ತೆ ಕೆಲವರೆನ್ನುತ್ತಿದ್ದಾರೆ.

ಕಳೆದ ವರ್ಷ ಮಾಸ್ಕೋದಲ್ಲಿ ಕೂಡಿದ ಮಂತ್ರಿ ಚತುಷ್ಟಯದ ಸಭೆಯಲ್ಲಿ ರಶಿಯವು ಚೀನದ ಪ್ರಶ್ನೆಯನ್ನೆತ್ತಲು ಪ್ರತಿನಿಧಿಯಿಲ್ಲದ ಸಭೆಯಲ್ಲಿ ಚೀನದ ಪ್ರಶ್ನೆ ಚರ್ಚಿಸಲ್ಪಡಬಾರದೆಂದು ಚಿಯಾಂಗ್ ಸರಕಾರವು ಸ್ಪಷ್ಟಪಡಿಸಿತು.

ಅಮೇರಿಕದ ರಾಯಭಾರಿಗಳಾದ ಡಾ. ಸ್ಟುವರ್ಟರು ಸುದ್ದಿಗಾರರ ಸಭೆಯಲ್ಲಿ ಮಾತನಾಡುತ್ತ ಚೀನಕ್ಕೆ ಅಮೇರಿವು ಸೈನ್ಯಸಹಾಯ ಕೊಡಕೂಡದೆಂದು ತಾನೆಂದೂ ವಿರೋಧಿಸಿಲ್ಲವೆಂದೂ ಮೇಲಾಗಿ ಚೀನವು ಆ ಬಗ್ಗೆ ಅಮೇರಿಕಕ್ಕೆ ಬಿನ್ನವಿಸಿಕೊಂಡಿಲ್ಲವೆಂದೂ ಹೇಳಿದುದಾಗಿ ತಿಳಿಯುತ್ತದೆ.

ರಶಿಯದ ಮಧ್ಯಸ್ಥಿಕೆಗೆ ಅಮೇರಿಕದ ಬಾಲಬಡಿವ ಚಿಯಾಂಗ್ ಸರಕಾರವು ಕೈಸೋತ ಹೊರತು ಎಂದಾದರೂ ಒಪ್ಪೀತೆಂಬುದು ಸುಳ್ಳು ಮಾತು. ಸದ್ಯಕ್ಕೆ ಸುಟ್ಟದ್ದು, ಕೇವಲ ವದಂ

## ಭಾರತ—ಪಾಕಿಸ್ತಾನಗಳ ಬಗ್ಗೆ ಬ್ರಿಟನದ ಔದಾರ್ಯ

ಭಾರತ—ಪಾಕಿಸ್ತಾನಗಳ ನಿರಾಶ್ರಿತರ ಹಾಗು ಭಾರತ ಮಂತ್ರಿಗಳ ನೌಕರರ ಪರಿಹಾರವನ್ನೊಳಗೊಂಡ ಅಂದಾಜ ಪತ್ರಿಕೆಯ ಬೇಡಿಕೆಯೊಂದರ ಬಗ್ಗೆ ನಡೆದ ಚರ್ಚೆಯಲ್ಲಿ ಕಾಮನ್ಸ್‌ವೆಲ್ತ ಮಂತ್ರಿ ನೋಯಲಬೇಕರರು ಕಾಮನ್ಸದಲ್ಲಿ ಮಾತಾಡುತ್ತ ನಿರಾಶ್ರಿತರ ಸಮಸ್ಯೆಯನ್ನು ಅಪರಿಮಿತ ಉತ್ಸಾಹದಿಂದ ಎದುರಿಸಿದ್ದಕ್ಕೆ ಹಿಂದುಸ್ತಾನ ಪಾಕಿಸ್ತಾಗಳ ಸರಕಾರಗಳನ್ನು ಅಭಿನಂದಿಸಿದರು.

ಹಿಂದುಸ್ತಾನ ಪಾಕಿಸ್ತಾನಗಳಲ್ಲಿ ಅಧಿಕಾರದಾನದ ಪರಿಣಾಮವಾಗಿ ಕೆಲಸ ಕಳೆದುಕೊಂಡ ಭಾರತ ಮಂತ್ರಿಗಳ ನೌಕರರಿಗೆ ಹಾಗು ನಿರಾಶ್ರಿತರಿಗೆ ೯೪,೦೦೦೦೦ಪೌಂಡುಗಳ ಪರಿಹಾರ ನೀಡಬೇಕೆಂದು ಆ ಬೇಡಿಕೆಯಲ್ಲಿ ಕಾಣಿಸಲಾಗಿದೆ.

ವಿರೋಧಿ ಪಕ್ಷದ ಪರವಾಗಿ ರಿಚರ್ಡ ಬಟ್ಲರರು ಮಾತಾಡುತ್ತ ನಿರಾಶ್ರಿತರ ಪರಿಹಾರಕ್ಕೆಂದು ರೆಡ್ ಕ್ರಾಸ ಸಂಸ್ಥೆಗೆ ೨೦೦೦೦ ಪೌಂಡುಗಳನ್ನು ನೀಡುವದು ಅತಿ ಕಡಿಮೆಯಾಗಿದೆಯೆಂದೂ ಸರಕಾರವು ಇನ್ನೊಮ್ಮೆ ವಿಚಾರ ಮಾಡಿ ಈ ಧನಸಹಾಯ ಮೊತ್ತವನ್ನು ಹೆಚ್ಚಿಸಬೇಕೆಂದೂ ಅಲ್ಲಿಯ ಅನಾಹುತಗಳಿಗೆ ಬ್ರಿಟನೇ ಕಾರಣವೆಂಬುದನ್ನು ಯಾರೂ ಮರೆಯತಕ್ಕದ್ದಲ್ಲವೆಂದೂ ಎಚ್ಚರಿಸಿದರು.

ಚರ್ಚೆಗೆ ನೋಯಲಬೇಕರರು ಉತ್ತರ ಕೊಡುತ್ತ ಭಾರತ-ಪಾಕಿಸ್ತಾನಗಳಲ್ಲಿ ನಡೆದ ಗಲಭೆಗಳ ಬಗ್ಗೆ ನಾವು ಸಹಾನುಭೂತಿ ಪಡಬೇಕಾಗಿದ್ದರೂ ಬಟ್ಲರರು ಹೇಳಿದಂತೆ ಇದಕ್ಕೆ ಬ್ರಿಟಿಶರು ಎಳ್ಳಷ್ಟೂ ಹೊಣೆಗಾರರಲ್ಲವೆಂದೂ ಹೇಳಿದರು.

## ಮೂಡಲ ಕೂಟ

ಕೈರೋನಗರದ ಪತ್ರಿಕೆಯೊಂದರಲ್ಲಿ ಮೂಡಲ ಕೂಟವೊಂದನ್ನು ರಚಿಸಲಾಗುವುದೆಂಬ ಸುದ್ದಿ ಹೊರಬಿದೆ. ಮೊದಲು ಆ ಕೂಟದಲ್ಲಿ ಅರಬರಾಜ್ಯಗಳು, ಪಾಕಿಸ್ತಾನ, ಭಾರತ ಅಫಗಾನಿಸ್ತಾನ, ಇರಾನ್ ಮತ್ತು ತುರ್ಕಿಗಳು ಸೇರಿ ಕ್ರಮೇಣ ಅತಿಪ್ರಾಚ್ಯದ ರಾಜ್ಯಗಳನ್ನು ಸೇರಲು ನಿಮಂತ್ರಿಸುವವು.

ಈ ಸೂಚನೆಯ ಕರ್ತರು ಹೀಗೆ ರೂಪಗೊಂಡ ಮೂಡಲ ರಾಜ್ಯಗಳ ಕೂಟವು ಆಂಗ್ಲೋ ಅಮೇರಿಕ ಮತ್ತು ರಶಿಯಗಳ ನಡುವೆ ಘರ್ಷಣ ಉಂಟಾಗದಂತೆ ತಡೆವ ದೊಡ್ಡ ಗೋಡೆಯಾಗುವುದೆಂದು ಹೇಳುತ್ತಾರೆ.

ಕೂಟದ ಕಲ್ಪನೆಯೇನೂ ಹೊಸದಲ್ಲ; ಅದು ಕಳೆದ ಆಂತರೇಶಿಯ ಸಂಬಂಧಗಳ ಪರಿಷತ್ತಿನಲ್ಲಿ ಸ್ಫೂರ್ತಿದಾಯಕವಾದ ಹಿಂದೀ ಮಹಾ ಪ್ರಧಾನ ಜವಾಹರಲಾಲ ನೆಹರುಗಳ ಅಧ್ಯಕ್ಷತೆಯಲ್ಲಿ ಅಂಗೀಕರಿಸಲಾದ ಏಶಿಯದ ಐಕ್ಯ ತತ್ವದ ಮುಂದೋಟವಷ್ಟೆ.

ಈ ಸಂದರ್ಭದಲ್ಲಿ ಮಹಾ ಪ್ರಧಾನ ನೆಹರುಗಳ ಸಹಾಯ ಸಹಕಾರಗಳನ್ನು ಯಾಚಿಸಲಾಗಿ ಅವರು ಈಜಿಪ್ತೇ ಮೊದಲು ಈ ವಿಷಯವನ್ನು ಎತ್ತುವುದು ಉತ್ತಮವೆಂದರು ಎಂದು ಪ್ರತಿಕೆಯ ವರದಿ.

ಮೂಡಲ ಕೂಟವು ಅವ್ಯವಹಾರ್ಯವಲ್ಲ, ಅನಿವಾರ್ಯವಾದುದು. ಪಡುವಲಿಗರು ತಮ್ಮ ತಮ್ಮ ಉದ್ಧಾರಕ್ಕಾಗಿ ಒಂದುಗೂಡಿ ಯತ್ನಿಸಿ ಜಯಶಾಲಿಗಳಾಗುತ್ತಿರುವಾಗ ಮೂಡಲಿಗರು ತಣ್ಣಗೆ ಕುಳಿತು ಕೊಳ್ಳುವುದು ಮೂರ್ಖತನ. ಅದರಲ್ಲಿ ಅತ್ತಲಿನವರು ವರಣವರ್ಣರು ಮತ್ತು ಇತ್ತಲಿನವರು ಹೀನವರ್ಣರು ಎಂದು ಪಾಶ್ಚಾತ್ಯ ಲೋಕ ತಿಳಿದಿರುವಲ್ಲಿಯವರೆಗೆ ಈ ಗೋಲಾರ್ಧಗಳ ಜನರಲ್ಲಿ ನಿಜವಾದ ಮೈತ್ರಿ ಉದಯಿಸದು. ನೀಚವರ್ಣರು ಇಲ್ಲವೆ ಬಣ್ಣದವರು ವರವರ್ಣರ ಇಲ್ಲವೆ ಬಿಳಿಯರ ಆಳಾಗಿ ಅಥವಾ ಅವರಿಂದ ಕೀಳೆನ್ನಿಸಿಕೊಂಡು ಬದುಕುವುದಸಾಧ್ಯ ಆದುದರಿಂದ ಅವರು ಒಂದಾಗಿ ಬಣಗಟ್ಟಿ ನಿಲ್ಲುವುದು ಶ್ರೇಯಸ್ಕರ.

\+ \+ \+

ಐರ್ಲಂಡಿನಲ್ಲಿ ಸಾಮಾನ್ಯ ಚುನಾವಣೆ ನಡೆಯಿತು. ಅದರಲ್ಲಿ ಡಿವೆಲರರ ಪಕ್ಷಕ್ಕೆ ೮ ಸೀಟುಗಳು ಸಿಗದಾದವು. ಮೊದಲಿನ ಪಾರ್ಲಿಮೆಂಟಿನಲ್ಲಿ ೧೩೮ ಸದಸ್ಯರಿದ್ದರೆ ಈಗ ಅದಕ್ಕೆ ೧೪೭ ಸದಸ್ಯರಿದ್ದಾರೆ.

ಡಿವೆಲರರ ಪಕ್ಷಕ್ಕೆ ಈಗ ಸಂಪೂರ್ಣ ಬಹುಮತವಿಲ್ಲದಿದ್ದರೂ ಕೆಲವು ಸ್ವತಂತ್ರರ ಮತ್ತು ರಾಷ್ಟ್ರೀಯ ಕೂಲಿಕಾರರ ನೆರವಿನಿಂದ ಅವರೇ ಪುನಃ ಅಧ್ಯಕ್ಷ

ಕರ್ಮವೀರ

ಹರಿಜನ ಪುರವಣಿ

# ಹರಿಜನ

'ಹರಿಜನವು' ಬಾಪುವಿನ ಸ್ವರವಾಗಿತ್ತು. ಅದು ಅವರ ಅತ್ಯಂತ ಕನ್ನಡಿಯಾಗಿತ್ತು. ಅದು ಜಗತ್ತಿನ ನಾನಾ ಭಾಗಗಳಲ್ಲಿರುವ ಅವರ ಗೆಳೆಯರಿಗೆ ಸಾಪ್ತಾಹಿಕ ಪತ್ರವೆನಿಸಿತು ಮತ್ತು ಸಹೋದ್ಯೋಗಿಗಳಿಗೆ ಅದು ದಿನ ದಿನದ ಕರ್ತವ್ಯವನ್ನು ನಿರ್ದೇಶಿಸುವ ಆಜ್ಞೆಗಳ ಕೋಶವೆನಿಸಿತು. ಅವರ ಪಾಲಿಗೆ ಅದು ಅಹಿಂಸಾತ್ಮಕ ವಿಚಾರ ಮತ್ತು ಸತ್ಯ ಭಾಷಣಗಳಲ್ಲಿ ತೆಗೆದು ಕೊಳ್ಳುವ ಒಂದು ಶಿಸ್ತು ಮತ್ತು ವ್ಯಾಯಾಮವೆನಿಸಿತ್ತು. ಮೌನವು ಅತ್ಯಾವಶ್ಯಕವಾದ ಮಾತೆಂದು ಅವರು ತಿಳಿದಿದ್ದರಿಂದ 'ಹರಿಜನ'ವು ಅವರ ಮೌನವಾಹಕವಾಗಿಯೂ ಪರಿಣಮಿಸಿತು, ಮತ್ತು ಅನೇಕ ವೇಳೆ ಅದು ತನ್ನ ಬರಹದಿಂದಾದುದಕ್ಕೆ ಕಡಿಮೆಯೆನಿಸದಷ್ಟು ಮಟ್ಟಿಗೆ ಮೌನದಿಂದಲೂ ಎಷ್ಟೋ ಕಾರ್ಯಗಳನ್ನು ಸಾಧಿಸಿದೆ.

ಸಾಮಾನ್ಯವಾಗಿ ರೂಢಿಯಲ್ಲಿರುವ ಅರ್ಥದಲ್ಲಿ 'ಹರಿಜನ'ವು ಒಂದು ಪತ್ರಿಕೆಯಾಗಿರಲಿಲ್ಲ. ಬರಹಕ್ಕಾಗಿ ಬರಹವೆಂಬುದನ್ನು ಬಾಪು ಯಾವಾಗಲೂ ತುಚ್ಛವೆಂದು ಗಣಿಸುತ್ತಿದ್ದರು. ಅವರ ಲೇಖನಿಯಿಂದ (ಕೆಲಸಕ್ಕೆ ಬರದ) ತಾತ್ವಿಕ ಅಥವಾ ಶಾಸ್ತ್ರೀಯ ಪ್ರಬಂಧಗಳು ಎಂದೂ ಹೊರಡುತ್ತಿರಲಿಲ್ಲ. ಹಾಗೆ ನೋಡಿದರೆ, ನಮ್ಮೆದುರಿಗಿರುವ ಸದ್ಯದ ಕರ್ತವ್ಯಕ್ಕೆ ಸಂಬಂಧಿಸದ ವಿಚಾರ ವೆಂದರೆ ಶಕ್ತಿಯ ಅಪವ್ಯಯ ಮತ್ತು ಒಂದು ಮನೋರೋಗ ಎಂದು ಅವರ ಮತ. ಬರವಣಿಗೆಯು ಅವರಿಗೆ ಯಾವಾಗಲೂ ಕಾರ್ಯಕ್ಕೆ ಹೊಂದಿಕೊಂಡದ್ದು. ಅದರ ಹಿನ್ನೆಲೆಯಲ್ಲಿ ಅಹಿಂಸಾಚಾರದ ಮೂಲಕ ಸತ್ಯಶೋಧನದಲ್ಲಿ ಮಾಡಿದ ಇಡೀ ಜೀವಿತ ಕಾಲದ ಪ್ರಯತ್ನ ಮತ್ತು ಪ್ರಯೋಗಗಳಿದ್ದವು.

'ಹರಿಜನ' ದೊಡನೆ ಸಂಪಾದಕನೆನಿಸಿ ಉಂಟಾದ ನನ್ನ ಸಂಬಂಧವು ಅವರೊಡನಿರುವ ನನ್ನ ಸಂಬಂಧದ ವಿಸ್ತರಣ ಮತ್ತು ಅವಶ್ಯಕವಾದ ಉಪಪ್ರಕರಣ ಎನ್ನಬೇಕು. ಅದರಿಂದ ನನಗೊದಗಿದ ವಿಶೇಷ ಹಕ್ಕೆಂದರೆ ಅವರ ಬಾಯಿಂದ ಉದುರಿದ ಪಕ್ವವಾದ ಜ್ಞಾನವನ್ನು ಸಂಗ್ರಹಿಸಿ ಅದನ್ನು ಅವರ ಕಾರ್ಯವನ್ನು ಅರ್ಥ ಮಾಡಿ, ಅಗತ್ಯವಿದ್ದಲ್ಲಿ ಯುಕ್ತವಾದ ವ್ಯಾಖ್ಯಾನ ಮತ್ತು ಟಿಪ್ಪಣಿಗಳನ್ನು ಕೊಡುವುದು. ಸಾಮಾನ್ಯವಾಗಿ ಅವರಿಗೆ ಮೊದಲು ತೋರಿಸದೆ ಇಲ್ಲವೆ ಆ ಮೇಲೆ ತೋರಿಸುವ ವ್ಯವಸ್ಥೆಯಿಲ್ಲದೆ ಯಾವುದನ್ನು ಪ್ರಕಟಿಸುತ್ತಿದ್ದಿಲ್ಲ.

ಆದುದರಿಂದ ಕಳೆದವಾರ ರಾಜಾಜಿಯವರು ಹೇಳಿದಂತೆ ಬಾಪು ಹೋದಮೇಲೆ ಇಂದಿನ ರೂಪದಲ್ಲಿ 'ಹರಿಜನ'ವು ಇನ್ನು ಮುಂದೆ ಸಾಗಲಾರದು. ಗೆಳೆಯರೊಡನೆ ಮತ್ತು ಪೂಜ್ಯ ಹಿರಿಯರೊಡನೆ ಆಲೋಚನೆಯಿಂದ ಅದರ ಅತ್ಯಂತಿಕ ಭವಿಷ್ಯವನ್ನು ನಿರ್ಧರಿಸುವವರೆಗೆ ಈಗಿನ ರೂಪದಲ್ಲಿ ಅದನ್ನು ಪ್ರಕಟಿಸುವುದನ್ನು ಬಿಡಲು ನಿರ್ಧರಿಸಿದ್ದೇನೆ. ರಾಷ್ಟ್ರಕ್ಕೆ ಅವರಿತ್ತ ಕಡೆಯ ಮೃತ್ಯುಪತ್ರದಲ್ಲಿ (ಇಲ್ಲೇ ಬೇರೆಡೆ ಅಚ್ಚಾಗಿದೆ) ರಾಷ್ಟ್ರೀಯ ಪ್ರಮಾಣದಲ್ಲಿ ಸಂಘಟಿತ ಅಹಿಂಸೆಯನ್ನು ಆಚರಣೆಕ್ಕೆ ತರಲು ಬೇಕಾದ ಯೋಜನೆಯೊಂದನ್ನು ಕೊಟ್ಟಿದ್ದಾರೆ. ಪುನರುಜ್ಜೀವನ ಪಡೆದ 'ಹರಿಜನ'ವು ಆ ಯೋಜನೆಗೊಂದು ಮುಖಪತ್ರ ಮತ್ತು ಸಾಧನಾಂಗವೆನಿಸಬಹುದು.

ಹೊಸ ಕ್ರಮದಲ್ಲಿ ಆಂಗ್ಲ ಭಾಷೆಯ 'ಹರಿಜನ'ದ ಅವಶ್ಯಕತೆಯುಂಟೇ ಎಂಬ ಪ್ರಶ್ನೆ ಹಾಗೇ ಉಳಿಯುತ್ತದೆ. ಸ್ವತಃ ಬಾಪುವೇ ಕಾಲಹೋದ ಹಾಗೆ 'ಹರಿಜನ'ದ ಭಾರತೀಯ ಭಾಷೆಯ ಪ್ರತಿಗಳಿಗೇ ಹೆಚ್ಚು ಹೆಚ್ಚು ಪ್ರಾಮುಖ್ಯ ಕೊಡುತ್ತ ಬಂದಿದ್ದರು. ಆದರಿಂದಲೇ ಅವರು ತಮ್ಮ ಮೂಲ ಲೇಖನವನ್ನು ಹಿಂದುಸ್ತಾನಿ ಮತ್ತು ಗುಜರಾತಿಯಲ್ಲೇ ಬರೆಯುತ್ತೇನೆಂದು ಮೊದಲಿಂದ ಮೇಲೆ ಆಗ್ರಹತೊಟ್ಟರು; ಅದನ್ನು 'ಹರಿಜನ'ಕ್ಕಾಗಿ ಇಂಗ್ಲೀಷಿಗೆ ಭಾಷಾಂತರಿಸಲಾಗುತ್ತಿತ್ತು. ಏಕೆಂದರೆ ಇಂಗ್ಲೀಷು ಅನವಶ್ಯಕವಷ್ಟೇ ಅಲ್ಲದೆ ಒಂದು ವಿಘ್ನವಾಗಿಯೂ ಪರಿಣಮಿಸಬಹುದು. ನಮ್ಮಾತ್ಮಕ್ಕೆ ಸರಿಯಾಗಿ ನಾವು ನಡೆದುಕೊಳ್ಳಬೇಕಾದರೆ ನಾವು ನಮ್ಮ ಮಾತನ್ನೇ ಬಳಸಬೇಕು.

ಹೊಸದಿಲ್ಲಿ

೧೬—೨—೪೮ ಪ್ಯಾರೇಲಾಲ

## ಓದುಗರಲ್ಲಿ ಬಿನ್ನಹ

ಮೇಲಿನ ಶ್ರೀ ಪ್ಯಾರೇಲಾಲರ ಲೇಖನದಿಂದ 'ಹರಿಜನ', ಅದರ ಹಿಂದುಸ್ತಾನಿ ಮತ್ತು ಗುಜರಾತಿ ಪ್ರತಿನಿಧಿಗಳಾದ 'ಹರಿಜನ ಸೇವಕ' ಮತ್ತು 'ಹರಿಜನಬಂಧು' ಇವುಗಳ ಪ್ರಕಟನೆಯನ್ನು ನವಜೀವನ ವಿಶ್ವಸ್ತ ಮಂಡಲವು ತಾತ್ಕಾಲಿಕವಾಗಿ ನಿಲ್ಲಿಸಿದೆಯೆಂಬುದು ಸ್ಪಷ್ಟವಾಗುತ್ತದೆ. ಗಾಂಧಿಯವರಿಲ್ಲದ ಈ ಕಾಲದಲ್ಲಿ ಅದನ್ನು ಹೊರಡಿಸಬೇಕೋ ಇಲ್ಲವೋ, ಹೊರಡಿಸುವುದಾದರೆ ಯಾವ ಭಾಷೆಯಲ್ಲಿ ಮುಂತಾದ ಪ್ರಶ್ನೆಗಳನ್ನು ಮುಂದಿನ ತಿಂಗಳು ವರ್ಧಾದಲ್ಲಿ ಇತ್ಯರ್ಥ ಪಡಿಸಲಾಗುವುದೆಂದು ತಿಳಿಯುತ್ತದೆ. ಪುನಃ 'ಹರಿಜನ' ಪ್ರಾರಂಭವಾದೊಡನೆ ಎಂದಿನಂತೆ ಪುರವಣಿಯನ್ನು 'ಕರ್ಮವೀರ'ದಲ್ಲಿ ಕೊಡಲಾಗುತ್ತದೆ.

—ಸಂ

# ಮಹಾತ್ಮಾ ಗಾಂಧಿ ಮತ್ತು ಜಾನ್ ರಸ್ಕಿನ್

ಎಲ್ಲದಕ್ಕಿಂತ ಹೆಚ್ಚಾಗಿ ರಸ್ಕಿನ್ನನು ಸಾಹಿತಿ; ಕರ್ಮವೀರನಲ್ಲ. ಅವನು ಲೇಖನಿ ಮತ್ತು ಕಾಗದವನ್ನು ತೆಗೆದುಕೊಂಡೊಡನೆ ಅವನ ಲೇಖನಿಯಿಂದ ಶಬ್ದವೃಷ್ಟಿಯೇ ಸುರಿದುಬಿಡುತ್ತಿತ್ತು. ಅವನ ಗದ್ಯವು ಅದ್ಭುತವಾಗಿತ್ತು; ಆದರೆ ಅವನ ನಿಲುಗಡೆ, ಅಭಿಜಾತ ಸಾಹಿತ್ಯಗಳಿಂದ ಕೊಟ್ಟ ಉದಾಹರಣೆ, ಶ್ರೀಮದ್ಗಂಭೀರ ಭರ್ತ್ಸನ ಇವು ಪರಿಣಾಮಕಾರಿತ್ವಕ್ಕಾಗಿಯೇ ಅವನು ಬರೆದನೆಂಬುದನ್ನು ಬಯಲಿಗೆಳೆಯುತ್ತವೆ. ಅವನು ಭಯಂಕರ ಅತಿದೋಷ ನಿರ್ಮೂಲನ ಪ್ರವೃತ್ತಿಯುಳ್ಳವನಿದ್ದುದರಿಂದ ಹಾಗಲ್ಲದೆ ಬೇರೆ ಮಾತ ನಾಡದವನಾಗಿದ್ದನು. ಅವನ ಪಾಲನೆಯು ಮತ್ತು ಶಿಕ್ಷಣಗಳು ಅವರ ಪ್ರತಿಭೆ ಮುಂಬೆಳೆಯದಂತೆ ತಡೆದವು. ಬಹಳ ಕಾಲ ಅವನು ಪ್ರಚ್ಛನ್ನನಾಗಿ ಬದುಕಬೇಕಾಗಿಯಿತು; ಏಕೆಂದರೆ, ಅವನ ಎಲ್ಲ ಭಾವ, ಅಭಿಪ್ರಾಯ ಮತ್ತು ಬರಹಗಳ ಮೇಲೂ ಅವನ ತಂದೆಯ ತಿರಸ್ಕಾರ ಮುಸುಕಿತ್ತು. ಅವನ ತಾಯಿಯಾದರೂ "ಎರಡು ಭಯಂಕರ ತಪ್ಪುಗಳಲ್ಲಿದ್ದಳು. 'ಮನುಷ್ಯರನ್ನು ಕಠಿನವಾದ ಶಿಸ್ತಿಗೆ ಒಳಪಡಿಸಬೇಕು; ದಿನದ ಬಾಳಿನಲ್ಲಿ ಅವರಿಗೆ ಅತ್ಯುಗ್ರವ್ಯಾಯಾಮ ಮಾಡಿಸಬೇಕು. ಅವರು ಕಲ್ಲಾಸಿನ ಮೇಲೆ ಮಲಗಲು, ಕರಿಕೊಪ್ಪೆಯನ್ನು ಜಗ್ಗಲು ಕಲಿಯಬೇಕು; ಆದರೆ ಅವರ ಹೃದಯವೆಂದೂ ಒಡೆದು ಹೋಗುವಂತಾಗಬಾರದು. ನೀವು ಹೆಂಗರುಳಿನಿಂದ, ಮುಂದಿನಿಂದ ನನ್ನನ್ನು ಹೊರೆದಿರಿ; ಅದರ ಫಲವಾಗಿ ನಾನು ನನ್ನೊಡನೆ ಆಡಿಗೆಯವನೊಬ್ಬನನ್ನು ಕರೆದುಕೊಳ್ಳದೆ ಒರಟುನಾಡುಗಳಲ್ಲಿ ಪಯಣಮಾಡಲಾರದವನಾದೆ. ನೀವು ನನ್ನನ್ನು ಜೀವನದ ತೀವ್ರವಾದ ಆವೇಶಾಗ್ನಿಯಲ್ಲಿ ಹೊಕ್ಕು ಹೊರಡಿಸಿದಿರಿ." ಎಂದು ತಾಯ್ತಂದೆಗಳ ಬಗ್ಗೆ ಅವನು ಬರೆದನು.

ತನಗೆ ಮಾಡಲೇಬೇಕೆಂದು ಎನಿಸಿದ್ದರಿಂದ ಅವನು ಕೆಲವು ಕಾರ್ಯಗಳನ್ನು ಮಾಡಿದ್ದಲ್ಲ; ಅದು ಅವನ ಮಾತಾಪಿತೃಗಳ ತೃಪ್ತಿಗಾಗಿ ಮಾತ್ರ. ತಾಯ ಸಂತೋಷಕ್ಕಾಗಿ ಅವನು ಮದುವೆಯಾಗಿ ತನ್ನ ಭಾವ ಜೀವನವನ್ನು ಭಗ್ನಮಾಡಿಕೊಂಡನು. ಅವನು ತನ್ನ ಕಾಲದ ಔದ್ಯೋಗಿಕ ಪದ್ಧತಿ ಮತ್ತು ಕುತ್ಸಿತನಡೆನುಡಿಗಳನ್ನು ದ್ವೇಷಿಸಿದನು. ಅವನು ಬಣ್ಣ ಸಹಾದನು, ಬರೆಯಲಾರದನು. ಅವನು ಬಣ್ಣ ಸಹಾದನು, ಬರೆಯಲಾರದನು, ಚಿನ್ನಬಣ್ಣಗಳನ್ನು ನೋಡಲಾರದಾದನು, ಬೆಳಗಿನ ಆಗಸವನ್ನು ಕಾಣಲಾರ—ಏಕೆ? "ನನಗೆ ತಿಳಿದ ಮತ್ತು ನಾನು ನೋಡುತ್ತಿರುವ ದುಃಖ ಚಿಹ್ನಗಳದೆಸೆಯಿಂದ." ಅಳ್ಳರ ಗುಂಪೆಂದು ತಾನು ಕರೆದ ಬಂಡವಾಲಿಗರಲ್ಲಿ ತಾನೂ ಒಬ್ಬನೆಂಬುದನ್ನು ಅವನು ಅರಿತಿದ್ದನು; ಏಕೆಂದರೆ, ಅವನ ತಂದೆ, ಬಿಳಿ ದ್ರಾಕ್ಷೆಯ ವ್ಯಾಪಾರದಿಂದ ತುಂಬ ಹಣಗಳಿಸಿ ಅವನಿಗೆ ದೊಡ್ಡ ಆಸ್ತಿಯನ್ನು ಉಳಿಸಿದ್ದನು. "ಈ ನನ್ನ ಹಣಕ್ಕೆ ನಿಜವಾದ ಅಸ್ತಿತ್ವವಿಲ್ಲ; ನನ್ನಲ್ಲಿ ಇದು ಇಲ್ಲದಿದ್ದರೆ ನೀವು ಇರುತ್ತಿದ್ದ ಸ್ಥಿತಿಗಿಂತ ಈಗ ಇನ್ನೂರು ಪೌಂಡುಗಳ ಕೊರತೆಯಿಂದ ಬಡವರಾಗಿದ್ದೀರಿ" ಎಂದು ರಸ್ಕಿನ್ನನು ಕೆಲಸಗಾರರಿಗೆ ಒಮ್ಮೆ ತಿಳಿಸಿದನು. ಆದರೆ ಅವರಿಗೆ ತನಗೆ ಎನಿಸಿದಂತೆ ನಡೆಯುವ ಸಾಮರ್ಥ್ಯವಿದ್ದಿಲ್ಲ. ವಿಶ್ರಾಂತಿ ನಿಸ್ಸಂಗ ಇವು ಬೇಕೆಂಬ ಆಶೆ ಮತ್ತು ಪ್ರತಿಭಟನೆ ಬೇಕೆಂದು ಕೂಗುವ ಮಾನವ್ಯ ದುಶ್ಚರಿತ, ಸಹಾಯಬೇಕೆಂದು ಅಳುವ ಜಗದ ದುಃಖ ಇವುಗಳ ಭಯಂಕರ ನಿಸಂಕ್ರಮಣ—ಈ ಎರಡರ ನಡುವೆ ಸಿಕ್ಕಿ ಅವನು ಚಿತ್ರಹಿಂಸೆಗೆ ಗುರಿಯಾಗಿ, "ತನ್ನ ಕಗ್ಗರಡೆಗಳ ನಡುವೆ ನನ್ನನ್ನು ನಿಸ್ಸಹಾಯನನ್ನಾಗಿ ಮಾಡಿ ಕೊಚ್ಚಿಕೊಂಡೇ ಹೋಗುವಂಥ ರಕ್ತನದಿಯೊಂದರ ಸದ್ದಿನಂತೆ ತೋರುತ್ತದೆ" ಎಂದು ನುಡಿವಂತಾಯಿತು. ಸಮಾಜದ ದುಶ್ಶೀಲಗಳನ್ನು ಅವನಂತೆ ಹಳಿದವರು ವಿರಳ. ಬೈಗುಳಗಳ ಶಕ್ತಿಯಲ್ಲಿ ಮಾರ್ಕ್ಸ್ ಮೊದಲಾದ ಎಲ್ಲ ಸಾಮ್ಯವಾದಿಗಳನ್ನೂ ಸಾವಿರಾರು ಮೈಲು ಹಿಂದೆ ಹಾಕಿದ ರಸ್ಕಿನ್ನನೊಡನೆ ಹೋಲಿಸಿದರೆ ಆಧುನಿಕ ಸಮಾಜವನ್ನು ಟೀಕಿಸಿದ ಸ್ಟಾಲಿನ್ನನು ತನಗೆ ಕಂಡದ್ದನ್ನು ಉಪದೇಶಿಸುವ ಹಳ್ಳಿಯ ಪಾದ್ರಿಯಂತೆ ತೋರುತ್ತಾನೆ—ಎಂದು ಬರ್ನಾರ್ಡ್ ಶಾ ಬರೆದಿದ್ದಾನೆ. ಆದರೆ ಬೀದಿಗೆ (ಹೆಣ್ಣು ಬೆಕ್ಕಿಗೆ) ಏನು ಬೇಕು, ಅದರದು ತನ್ನ ಚೆಂಡನ್ನು (Paut) ಶೀರಿಗೆ ಮುಟ್ಟಿಸಲು ಕಯ್ಯಾರಿಲ್ಲ—ಎಂಬುದೇ ಒಂದು ದುರಂತದ ಸಂಗತಿ. ಹುಟ್ಟಿನಿಂದ ಮತ್ತು ಸಾಕುಸಲಹಿನಿಂದ ಅವನ ದೇಹ ಮತ್ತು ಬುದ್ಧಿ ಪರಂಪರಾಸದೃಶವಾಗಿಯೇ ಇತ್ತು; ತಪ್ಪಿಸಿಕೊಳ್ಳಲು ಎಷ್ಟು ಪ್ರಯತ್ನಿಸಿದರೂ ಆಗದೆ ಅವನು ದುಂದುಮಾಡುವ ಪುಣ್ಯ ಪುರುಷ ವರ್ಗಕ್ಕೆ ಸೇರಿದವನಾಗಿಯೇ ಉಳಿದನು. ಅವನ ಅದ್ಭುತ ಗದ್ಯ ಮತ್ತು ಅವನ ಉಜ್ವಲ ವಿಡಂಬನಗಳು ಕಾರ್ಲೈಲನನ್ನು ಬಹಳವಾಗಿ ಕಲಕಿದ ಕಾರಣ ರಸ್ಕಿನ್ನನ 'ಕಡೆಯವನಿಗೆ' ಎಂಬ ಪ್ರಬಂಧವು "ಕಾರ್ನ್ ಹಿಲ್ ಮಾಸಿಕ"ದಲ್ಲಿ ಭಾಗ ಭಾಗವಾಗಿ ಪ್ರಕಟವಾಗುತ್ತಿದ್ದಾಗ ಕಾರ್ಲೈಲನು ಅವನನ್ನು ಕುರಿತು "ಪ್ರತಿಭಾವಂತ ಮನುಷ್ಯ, ವಿಲಕ್ಷಣ, ಚಿಕ್ಕ ಪ್ರೋಕ, ಆವೇಶ ಭರಿತ ಸ್ವಭಾವದವನು; ಆದರೆ ತನ್ನ ಕೈಯಲ್ಲಿ ಸರಳ್ಯನ್ನೆ:ಚ-ಚ್ಚುವ ನಿಜವಾದ ಮಿಂಚುಗೋಲನ್ನು, ಅಗ್ನಿಬಾಣಗಳನ್ನು ಹಿಡಿದವನು," ಎಂದುದಲ್ಲದೆ ರಸ್ಕಿನ್ನನಿಗೆ ಸ್ವತಃ "ನಿನ್ನ ಕರ್ತಾನಿಶಿತತೆಯನ್ನು ಕಂಡು ಮತ್ತು ನೀನು ತೆಗೆದುಕೊಂಡ ಕೆಲವು ಉಬ್ಬಿದ ಗಲ್ಲದ, ಕೊಬ್ಬಿದ ಹೊಟ್ಟೆಯ ಅಗ್ನಿಚಿತ್ರಗಳನ್ನು ಅವಲೋಕಿಸಿ ನಾನು ಕೆಲಮಟ್ಟಿಗೆ ಆಶ್ಚರ್ಯಪಟ್ಟಿದ್ದೇನೆ," ಎಂದು ಬರೆದನು.

## ದೃಢಸಂಕಲ್ಪವಿಲ್ಲ

ಗಾಂಧಿಯವರು ಇದಕ್ಕಿಂತ ಸಂಪೂರ್ಣ ಭಿನ್ನವಾದ ಅಚ್ಚಿನಲ್ಲಿ ರೂಪಿಸಲ್ಪಟ್ಟವರು. ರಸ್ಕಿನ್ನನು ಪ್ರತಿಭಾವಂತನಾದರೂ ಅವನಿಗೆ ಮನೋನಿಶ್ಚಯ ವಿಲ್ಲ. ಚಿಕ್ಕಂದಿನಿಂದ ತಾನೆಂದುದನ್ನು ಸಾಧಿಸುವ ಬಗೆ ಗಾಂಧಿಯವರಿಗೆ ಗೊತ್ತಿತ್ತು; ಪರಿಸ್ಥಿತಿಯನ್ನು ಮೀರಿ ನಿಲ್ಲುವುದು ಹೇಗೆಂದು ಅವರು ಬಲ್ಲರು. ಸರಿಯಾಗಿ ವಿಚಾರಿಸುವದು ಹೇಗೆ, ಅದಕ್ಕಿಂತ ಹೆಚ್ಚಾಗಿ ವಿಚಾರವನ್ನು ಆಚರಣೆಗೆ ತರುವುದು ಹೇಗೆ ಎಂಬೀಯೆಲ್ಲವೂ ಅವರಿಗೆ ಕರತಲಾಮಲಕವಾಗಿತ್ತು. ರಸ್ಕಿನ್ನನ ಪ್ರತಿಭೆಯು ಅವನ 'ಕಡೆಯವನಿಗೆ' ಎಂಬ ಪ್ರಬಂಧವನ್ನು ಬರೆಯಲು ಅವನಿಗೆ ಸಾಮರ್ಥ್ಯ ಕೊಟ್ಟಿತು; ಆದರೆ ಪತ್ರಿಕೆಗಳಲ್ಲಿ ಅವನ ಆರ್ಥಿಕ ಅನಾಚಾರಗಳ ಮೇಲೆ ಟೀಕಾಸ್ತ್ರಗಳ ಪ್ರಯೋಗ ನಡೆದಾಗ ಅದಕ್ಕೆ ಬಾಗಿ ತನ್ನ ಪ್ರಬಂಧ ಮಾಲೆಯನ್ನು ಮುಂದುವರಿಸದೆ ಅರ್ಧಕ್ಕೇ ಬಿಟ್ಟುಬಿಟ್ಟನು. ಗಾಂಧಿಯವರಿಗಾದರೋ ಒಂದು ರಾತ್ರಿ ಈ ಪುಸ್ತಕವನ್ನೋದಿದ್ದೇ ಅವರ ಅಂತರಂಗದಲ್ಲಿದ್ದ ಮದ್ದಿನ ಮನೆಗೆ ಬೆಂಕಿ ಕೊಟ್ಟು ಅವರ ಜೀವನವನ್ನೇ ಬದಲಾಯಿಸಲು ಸಾಕಾಯಿತು. ಆಚರಣೆಗೆ ತರುವ ಸಂಕಲ್ಪಶಕ್ತಿಯಿಲ್ಲವಾಗಿ ಆ ಪುಸ್ತಕದಲ್ಲಿ ಕೆಲವು ಅತ್ಯಂತ ನ್ಯಾಯಬದ್ಧವಾದ ವಿಚಾರಗಳು ಕಾಣಸಿಗುವವು. ಧಣಿಯಲ್ಲಿಯ ಹಡಗುಗಳು ಫಿರಂಗಿಗಳನ್ನು ಹೊತ್ತುಕೊಂಡು ಬರುವುದರ ಬದಲು ನಾಟ (Timber) ಮತ್ತು ಕಲ್ಲಿದ್ದಲನ್ನು ಹೊತ್ತು ತರುವುದನ್ನು, ಶಸ್ತ್ರಗಳ ಹಿಡಿಗಳನ್ನು ನಡಲು ಸಾಮಗ್ರಿಗಳನ್ನು ಹೊತ್ತು ತರುವುದರ ಬದಲು ಅವು ಅಲ್ಲಿಗೆ ಮನೆಯಲ್ಲಿ ಒಲೆ ಉರಿಸಲು ಬೇಕಾದ ಉರುವಲನ್ನು ಹೇರಿಕೊಂಡು ಬರುವುದನ್ನು ಕಲ್ಪಿಸಿದನು; ಆದರೆ ಅದಕ್ಕಾಗಿ ನ್ಯಾಯಬದ್ಧ ಅರ್ಥಸಾಮ್ಯಕ್ಕಾಗಿ ಹೋರಾಡುವ ಆಲೋಚನೆ ಮಾಡಿದನು. ಅವನ ಒಂದು ಗ್ರಂಥವು ಪರದುಃಖರಾದ ವ್ಯಾಪಾರಿಗಳನ್ನು ಎದುರಿಸಿತು. ಅವರ ಲಾಭವು ವಿನಿಮಯಕಾರರಿಗೆ ವಸ್ತುಗಳ ವಿನಿಮಯದ ಬೆಲೆಯನ್ನು ತೀರಿಸದೆ ಅನ್ಯಾಯದಲ್ಲಿ ಪಡೆವುದರ ಮೇಲೂ ಕೊಂಡವನ ಅವಶ್ಯಕತೆ ಮತ್ತು ಮಾರುವವನ ದಾರಿದ್ರ್ಯಗಳ ಮೇಲೂ ಅವಲಂಬಿಸಿದೆ ಎಂದು ಅವನು ಸಾರಿದನು.

ಆದರೆ ಮಧ್ಯಸ್ಥವ್ಯಾಪಾರಿಯನ್ನು (Middleman) ತೆಗೆದೊಗೆಯಲು ಅವನು ಏನೂ ಮಾಡಲಿಲ್ಲ. ಗಾಂಧಿಯವರು ಅವನ Munera Pulveris ಗ್ರಂಥವನ್ನು ಓದಿಲ್ಲ; ಆದರೆ 'ಕಡೆಯವನಿಗೆ' ಎಂಬ ಗ್ರಂಥದ ಹಿಂದೇ ನಾಟಿನ ಪ್ರತಿಯೊಂದು ವಿಚಾರವನ್ನೂ ಅವರ ತರ್ಕಬದ್ಧ ನಿಗಮನಕ್ಕೆ ಮುಟ್ಟಿಸಲು ಅವರಿಗೆ ಸಾಕಾಯಿತು. ಮತ್ತು ಅವರು ನಿರ್ಮಿಸಿದ ಎರಡು ಮಹಾ ಸಂಘಗಳಾದ ಅ. ಭಾ. ನೂಲಿಗರ ಸಂಘ ಮತ್ತು ಗ್ರಾಮೋದ್ಯೋಗ ಸಂಘಗಳಲ್ಲಿ ಮಧ್ಯಸ್ಥರನ್ನು ಇಲ್ಲದಂತೆ ಮಾಡುವುದರಲ್ಲಿ ಜಯಶೀಲರಾದರು. "ಕೊಳ್ಳುವುದು ಮತ್ತು ಮಾರುವುದರ ಸಂಧಿಯಲ್ಲಿ ಪಾಪವು ಅಂಟಾಗಿ ಅಂಟಿಕೊಳ್ಳುವುದು" ಎಂದು ರಸ್ಕಿನ್ನನು ಹೇಳುತ್ತಿದ್ದ; ಅದರ ಪರಿಹಾರಕ್ಕೆ ಅವನ ಪ್ರಕಾರ ರಾಷ್ಟ್ರೀಯ ಚರಿತ (Character) ವನ್ನು ಪವಿತ್ರಗೊಳಿಸುವುದೊಂದೇ ಉಪಾಯ. ಆದರೆ ನಮ್ಮ ಸಾಮಾಜಿಕ ಮತ್ತು ಆರ್ಥಿಕ ದಸ್ತುರಿಗಳ ನಿವಾರಣೆಗೆ ಅಹಿಂಸೆಯೊಂದೇ ಅಸ್ತ್ರವೆಂಬುದನ್ನು ಅವನು ಅರಿಯಲಿಲ್ಲ. ತನ್ನ ತಂದೆಗೆ ತಾನು ಅರ್ಥಹೀನವಾದ ಶಬ್ದಾಡಂಬರದ ಬರಹಗಳನ್ನು ಬರೆದು ಪ್ರಕಟಿಸಿದರೆ ಬಹಳ ಸಂತೋಷವಾಗುತ್ತಿತ್ತು. ಮತ್ತು ತಾನು ಯಾರನ್ನೂ ನೋಯಿಸದಂತೆ ಕೇವಲ ಪತ್ರಿಕೆಯಲ್ಲಿ ಉಳಿಯುವಂತೆ ಮಾತಾಡುವೆನೆಂದು ತಿಳಿದರೆ ಅವನು ತನ್ನನ್ನು ಪಾರ್ಲಿಮೆಂಟಿನ ಸದಸ್ಯನನ್ನಾಗಿ ಮಾಡಲು ಸ್ವಾರ್ಜಿತದ ಅರ್ಧವನ್ನಾದರೂ ಬೇಕಾದರೂ ವೆಚ್ಚ ಮಾಡಿಯಾನು ಎಂಬುದು ಅವನಿಗೆ ಗೊತ್ತಿತ್ತು. ಅವನ ಬುದ್ಧಿ ಅದರ ವಿರುದ್ಧ ಬಂಡೆದ್ದಿತು; ಆದರೆ ತನಗರಿಯದಂತೆಯೇ ಅವನು ಅನೇಕ ವೇಳೆ ತನ್ನ ತಂದೆ ಬಯಸಿದ್ದನ್ನೇ ಮಾಡಿದನು. ಗಾಂಧಿಯವರೆಂದೂ ಅರ್ಥವಿಲ್ಲದ ಪೊಳ್ಳು ಶಬ್ದಗಳನ್ನು ಬರೆಯಲಾರರು. ಅಲ್ಲದೆ ತನ್ನ ಬಾಳಿನಲ್ಲಿ ಪರೀಕ್ಷಿಸದೆ ಯಾವುದನ್ನೂ ಅವರು ಎಂದೂ ಬರೆಯಲಾರರು; ತಾವು ಮಾಡದ ಯಾವ ಕಾರ್ಯವನ್ನೂ ಮಾಡಿರೆಂದು ಅವರು ಸಾರ್ವಜನಿಕರಿಗೆ ಬಿನ್ನವಿಸಿಕೊಂಡಿಲ್ಲ. ರಸ್ಕಿನ್ನನಿಗಿಂತ ಹೆಚ್ಚಾಗಿ ಯಾವ ಆಂಗ್ಲ ಬರಹಗಾರನೂ ಬೈಬಲ್ಲಿನ ಮಹಾವಾಕ್ಯಗಳನ್ನು ಉದ್ಧರಿಸಿಲ್ಲ; ಆದರೆ ಅವನವಿಷಮವಾದ ಭಾವನಾ ಸರಣಿಯು ಬೈಬಲ್ಲಿನಲ್ಲಿಯ ಉಪದೇಶವು ಅವನ ನೈತಿಕ ಶಕ್ತಿಯಲ್ಲಿ ಪರಿಣಾಮಕಾರಿಯಾಗಿ ಬಡಮೂಡಿದ್ದಕ್ಕೆ ಸಾಕ್ಷಿ ಕೊಟ್ಟಿಲ್ಲ. ಅವನ ಸೆಂಟ್ ಜಾರ್ಜಿಗಿಲ್ಡ್ ಎಂಬುದು ಒಂದು ಸ್ವಯಂ ಪ್ರೇರಿತಸಂಘ, ಅದರಲ್ಲಿ ಜನರು ತಮ್ಮ ಆದಾಯದ ಹತ್ತನೇಯ ಒಂದಾಂಶವನ್ನು ಕೂಡಿಸಿ ಯುಕ್ತವಾದ ಜೀವನ ಅರ್ಥಾತ್ ದೇಹಶ್ರಮ ಮತ್ತು ಸದ್ವಿಚಾರದ ಜೀವನವನ್ನು ನಡೆಸುವುದು ಎಂದು ಮಾಡಲಾಗಿತ್ತು. ಆದರೆ ಅಲ್ಲಿಯೂ ಅವನು ವರ್ಗ ಭೇದವನ್ನು ಅಳಿಸಲಾರದವನಾದ. ಈಗ ಆ ಸಂಘದ ಕುರುಹೊಂದೂ ಉಳಿದಿಲ್ಲ. ಕಳೆದ ಯುದ್ಧದ ಕೊನೆಯಲ್ಲಿ ನಿಧಿಯನ್ನೇನು ಮಾಡಬೇಕೆಂಬುದನ್ನು ಅರಿಯಲಾರದವರಾಗಿ ವಿಶ್ವಸ್ತರು ಸಂಘವನ್ನೇ ಕೈಬಿಟ್ಟರು. "ಬಾಳಿಗಿಂತ ಬೇರೆಯ ಐಶ್ವರ್ಯವಿಲ್ಲ" ಎಂಬುದಕ್ಕಿಂತ ಹೆಚ್ಚು ಸುಂದರವಾದ ಸತ್ಯವಾವುದಿದೆ? ಮತ್ತು "ನಮ್ಮ ಎಲ್ಲ ಕಾರಖಾನೆ ಗಿರಣಿಗಳ ನಗರಗಳಿಂದಲೂ ಒಂದು ದೊಡ್ಡ ಕೂಗೇಳುತ್ತದೆ; ಅದು ಅವುಗಳ ಆಣಿಗೆಯ ಉರಿಯ ಅರ್ಭಟಕ್ಕಿಂತ ಗಟ್ಟಿಯಾದುದು ಮನುಷ್ಯರನ್ನು ಬಿಟ್ಟು ಉಳಿದ ಎಲ್ಲವನ್ನೂ ನಾವು ಅಲ್ಲಿ ತಯಾರಿಸುತ್ತೇವೆ. ಹತ್ತಿಯ ಬಣ್ಣವನ್ನು ತೆಗೆಯುತ್ತೇವೆ. ಸಕ್ಕರೆಯನ್ನು ಶುದ್ಧಮಾಡುತ್ತೇವೆ. ಮಾಡಿಕೆಗಳನ್ನು

(ಆನೆಯ ಪುಟ ನೋಡಿರಿ)

# ಅವರ ಕಡೆಯ ಮೃತ್ಯುಪತ್ರ

ಈ ಕೆಳಗಿನದು ಹಿಂದೆ ಅಚ್ಚಾದ 'ಹರಿಜನಬಂಧು' ವಾರ್ತಾಪತ್ರದಲ್ಲಿ ಹೇಳಿದ ಕಾಂಗ್ರೆಸ್ಸಿನ ಘಟನೆಯು ಕೇವಲ ಗಾಂಧಿಯವರ ಸಾವಿನಿಂದ ಅದೇ ಅವರು ರಾಷ್ಟ್ರಕ್ಕೆ ಕೊಟ್ಟ ಕಡೆಯ ಮೃತ್ಯುಪತ್ರ ಮತ್ತು ಅಂತ್ಯನಿರ್ದೇಶಕ ವೆನಿಸಿದೆ.

— ಪ್ಯಾರೇಲಾಲ

ಭಾರತವು ವಿಭಕ್ತವಾದರೂ ಅ. ಭಾ. ಕಾಂಗ್ರೆಸ್ಸು ಯೋಜಿಸಿದ ಸಾಧನದಮೂಲಕ ರಾಜಕೀಯ ಸ್ವಾತಂತ್ರ್ಯವನ್ನು ಪಡೆಯಿತು. ಪ್ರಚಾರ ಸಾಧನ ಮತ್ತು ಘಟನಾತ್ಮಕ ಪಾತ್ರವೆನಿಸಿದ ಕಾಂಗ್ರೆಸ್ಸು ಅದರ ಇಂದಿನ ರೂಪದಲ್ಲಿ ಅಪ್ರಯೋಜಕತೆಗೆ ಬಂದು ಮುಟ್ಟಿದೆ. ನಗರಗಳನ್ನುಳಿದು ಭಾರತವಿನ್ನೂ ತನ್ನ ೭೦ ಲಕ್ಷ ಹಳ್ಳಿಗಳಲ್ಲಿ ಸಾಮಾಜಿಕ ನೈತಿಕ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯಬೇಕಾಗಿದೆ. ಪ್ರಜಾಸತ್ತಾತ್ಮಕ ಧ್ಯೇಯ ಪತ್ತ ಮುಂಬರಿವ ಭಾರತದಲ್ಲಿ ಮಿಲಿಟರಿ ಅಧಿಕಾರವನ್ನು ಮೀರಿನಿಲ್ಲಲು ಮೂಲ್ಕಿವರ್ಗವು ಹೋರಾಡುವುದು ನಡೆದೇತೀರುವುದು ರಾಜಕೀಯ ಪಕ್ಷ ಮತ್ತು ಜಾತೀಯ ಸಂಘಗಳೊಡನೆ ಅದು ಹುಚ್ಚುಸ್ಪರ್ಧೆಗೆ ನಿಲ್ಲದಂತೆ ನೋಡಿಕೊಳ್ಳಬೇಕು. ಈ ಮತ್ತು ಇನ್ನಿತರ ಕಾರಣಗಳಿಗಾಗಿ ಅ. ಭಾ. ಕಾಂ. ಕಮೀಟಿಯು ಸಧ್ಯದ ಕಾಂಗ್ರೆಸ್ ಸಂಸ್ಥೆಯನ್ನು ವಿಸರ್ಜಿಸಿ ಕೆಳಗಿನ ನಿಯಮಗಳಿಗನುಗುಣವಾಗಿ ಸಂದರ್ಭಾನುಸಾರ ಅದನ್ನು ಬದಲಿಸುವ ಅಧಿಕಾರವನ್ನಿಟ್ಟುಕೊಂಡು ಒಂದು ಲೋಕಸೇವಕಸಂಘವಾಗಿ ಪರಿಣಮಿಸಬೇಕೆಂಬ ಠರಾವನ್ನು ಪಾಸುಮಾಡಿತು.

ಐದು ಜನ ಗಂಡಸರು ಇಲ್ಲವೆ ಹೆಂಗಸರ ಪಂಚಾಯತವು ಒಂದು ಮೂಲ ಘಟಕವೆನಿಸುತ್ತದೆ. ಅವರು ಹಳ್ಳಿಗರು ಇಲ್ಲವೆ ಹಳ್ಳಿಯ ಪರವಾಗಿ ಪ್ರೀತಿಯುಳ್ಳವರಾಗಿರಬೇಕು.

ಅಂತಹ ೨ ಸುಸಂಬದ್ಧ ಪಂಚಾಯತಗಳು ಸೇರಿ ಒಂದು ಕಾರ್ಯನಿರ್ವಾಹಕ ಪಕ್ಷವೆನಿಸುತ್ತದೆ. ಅವರಲ್ಲಿಂದಲೇ ಆಯ್ದ ಒಬ್ಬ ಮುಖಂಡನು ಅವಕ್ಕಿರತಕ್ಕದ್ದು.

ಅಂತಹ ಒಂದು ನೂರು ಪಂಚಾಯತಗಳಿದ್ದರೆ ೫೦ ಜನ ಮೊದಲ ವರ್ಗದ ಮುಖಂಡರು ಅವರಿಗಿಂತ ಮೇಲಿರತಕ್ಕ ಒಬ್ಬ ೨ನೆಯ ವರ್ಗದ ಮುಖಂಡನನ್ನು ಆರಿಸುವದು ಮತ್ತು ಆದ್ಯ ಹಾಗೇ ಮುನ್ನಡೆಯುವುದು, ಅವರು ಆ ಕಾಲದಲ್ಲಿ ಆ ೨ ನೆಯ ವರ್ಗದ ಮುಖಂಡನ ಕೈಕೆಳಗೆ ಕೆಲಸ ಮಾಡುತ್ತಿರಬೇಕು. ಅದೇ ತೆರನಾದ ೨೦೦ ಗುಂಪುಗಳನ್ನು ಇಡೀ ಭಾರತ ತುಂಬುವ ವರೆಗೆ ಸಂಘಟಿಸುತ್ತ ಹೋಗತಕ್ಕದ್ದು. ಮೊದಲನೆಯದರಂತೆ ಆ ಮೇಲೆ ಬರುವ ಪ್ರತಿಯೊಂದು ಪಂಚಾಯತದ ಗುಂಪೂ ೨ನೆಯ ವರ್ಗದ ಮುಖಂಡನನ್ನು ಆಯುಕ್ತ ಹೋಗಬೇಕು. ಇಡಿ ಭಾರತಕ್ಕಾಗಿ ಎಲ್ಲ ೨ನೆಯ ವರ್ಗದ ಮುಖಂಡರೂ ಒಟ್ಟಿಗೆ ದುಡಿಯುತ್ತಾರೆ ಮತ್ತು ತಮ್ಮ ತಮ್ಮ ಪ್ರದೇಶಗಳಿಗಾಗಿ ಬಿಡಿಬಿಡಿಯಾಗಿ ಕೆಲಸಮಾಡುತ್ತಾರೆ. ಅವಶ್ಯಬಿದ್ದಾಗ ಈ ೨ನೆಯ ವರ್ಗದ ಮುಖಂಡರು ತಮ್ಮಲ್ಲಿಂದ ಒಬ್ಬ ಮುಖಂಡನನ್ನು ಆರಿಸಬಹುದು. ಅವನು ತನ್ನ ಅನುಕೂಲದಂತೆ ಎಲ್ಲ ಗುಂಪುಗಳನ್ನು ಕ್ರಮಬದ್ಧಗೊಳಿಸಿ ಅವುಗಳ ಮೇಲೆ ಅಧಿಕಾರ ನಡೆಸುತ್ತಾನೆ.

(ಪ್ರಾಂತ ಇಲ್ಲವೆ ಜಿಲ್ಲೆಗಳ ಅಂತ್ಯರೂಪವು ಅನಿರ್ದಿಷ್ಟವಿರುವದರಿಂದ ಈ ಸೇವಕರ ಗುಂಪುಗಳನ್ನು ಪ್ರಾಂತೀಯ ಇಲ್ಲವೆ ಜಿಲ್ಲಾ ಸಮಿತಿಗಳನ್ನಾಗಿ ವಿಭಜಿಸುವ ಪ್ರಯತ್ನವನ್ನು ಮಾಡಿಲ್ಲ; ಮತ್ತು ಇಡಿ ಭಾರತದ ಮೇಲಿನ ಆಡಳಿತ ಮಿತಿಯನ್ನು ಯಾವುದಾದರೊಂದು ಕೊಟ್ಟ ಕಾಲದಲ್ಲಿ ನಿರ್ಮಿತವಾದ ಗುಂಪು ಇಲ್ಲವೆ ಗುಂಪುಗಳ ವಶದಲ್ಲಿಡತಕ್ಕದ್ದು. ಈ ಸೇವಕರ ಸಮಿತಿಯು ಅದರ ಒಡೆಯನೆನಿಸಿದ ಅಖಿಲ ಹಿಂದುಸ್ತಾನಕ್ಕೆ ಗುಣುಗುಟ್ಟದೆ ಬುದ್ಧಿವಂತಿಕೆಯಿಂದ ಮಾಡಿದ ಸೇವೆಯಿಂದಲೆ ಅಧಿಕಾರವನ್ನು ಪಡೆಯುತ್ತದೆ ಎಂಬುದನ್ನು ಗಮನದಲ್ಲಿಡತಕ್ಕದ್ದು.

೧. ಪ್ರತಿಯೊಬ್ಬ ಕೆಲಸಗಾರನೂ ಅ. ಭಾ. ನೂಲಿಗರ ಸಂಘದಿಂದ ಶಿಫಾರಸುಪಡೆದ ಇಲ್ಲವೆ ಸ್ವಂತ ಕೆಗೆದ ನೂಲಿನಿಂದ ತಯಾರಾದ ಖಾದಿಯನ್ನು ಸದಾ ಧರಿಸುವ ರೂಢಿಯುಳ್ಳವನಾಗಿರಬೇಕು ಮತ್ತು ಕುಡುಕನಾಗಿರಬಾರದು. ಅವನು ಹಿಂದುವಾಗಿದ್ದರೆ ಅವನು ಸರ್ವ ರೂಪದ ಅಸ್ಪೃಶ್ಯತೆಯನ್ನು ಸ್ವತಃ ಇಲ್ಲವೆ ಸ್ವಕುಟುಂಬದಲ್ಲಿ ನಿವಾರಿಸಿ ಬಿಟ್ಟವನಾಗಿರಬೇಕು ಮತ್ತು ಅಂತರ್ಜಾತೀಯ ಐಕ್ಯದಲ್ಲಿ ಶ್ರದ್ಧೆಯುಳ್ಳವನಾಗಿರಬೇಕು. ಅಲ್ಲದೆ ಎಲ್ಲ ಧರ್ಮಗಳಿಗೂ ಸಮಾನ ಮರ್ಯಾದೆಯನ್ನು ಕಲ್ಪಿಸುವವನಾಗಿರತಕ್ಕದ್ದು ಮತ್ತು ಕುಲ, ಧರ್ಮ ಇಲ್ಲವೆ ಲಿಂಗಭೇದವನ್ನು ಗಮನಿಸದೆ ಸರ್ವರಿಗೂ ಸಂದರ್ಭ ಸಮಾನತೆ ಮತ್ತು ಸ್ಥಾನವನ್ನು ಕೊಡುವ ಧೋರಣೆಯವನಾಗಿರಬೇಕು.

೨. ಅವನು ತನ್ನ ಅಧಿಕಾರ ಕ್ಷೇತ್ರದಲ್ಲಿಯ ಪ್ರತಿಯೊಬ್ಬ ಹಳ್ಳಿಗನನ್ನು ಪರಿಚಯಮಾಡಿಕೊಂಡಿರಬೇಕು.

೩. ಅವನು ಹಳ್ಳಿಗಳಿಂದ ಕೆಲಸಗಾರರನ್ನು ಸೇರಿಸಿಕೊಂಡು ತರಬೇತು ಕೊಡಬೇಕಲ್ಲದೆ ಈ ಎಲ್ಲ ಕಾರ್ಯಗಳ ರಜಿಸ್ಟರ್ ಒಂದನ್ನು ಇಡತಕ್ಕದ್ದು.

೪. ಅವನು ಪ್ರತಿದಿನ ತನ್ನ ಕೆಲಸಕ್ಕೆ ದಿನಚರಿಯನ್ನಿಡತಕ್ಕದ್ದು.

೫. ಸ್ವಯಂ ಪೂರ್ಣ ಮತ್ತು ಸ್ವಯಂ ಸಹಾಯಕಗಳನ್ನಾಗಿ ಹಳ್ಳಿಗಳನ್ನು ಅವನು ಸಂಘಟಿಸಬೇಕು. ಆ ಬಗ್ಗೆ ಅವರ ಕೃಷಿ ಮತ್ತು ಕೈಗಾರಿಕೆಗಳಿಗೆ ಪ್ರೋತ್ಸಾಹ ಕೊಡಬೇಕು.

೬. ಆರೋಗ್ಯ ಮತ್ತು ನೈರ್ಮಲ್ಯವನ್ನು ಹಳ್ಳಿಗರಿಗೆ ಅವನು ಕಲಿಸಬೇಕು; ಮತ್ತು ಅವರಲ್ಲಿ ಅನಾರೋಗ್ಯ ಮತ್ತು ಕಾಹಿಲೆಗಳು ತಲೆದೋರದಂತೆ ಮುಂಜಾಗ್ರತೆ ವಹಿಸಬೇಕು.

೭. ಅವನು ಹಳ್ಳಿಗರ ವಿದ್ಯಾಭ್ಯಾಸಕ್ಕೆ ಅನುವುಮಾಡಿ ಕೊಡಬೇಕು; ನಯೀತಾಲೀಮ ಪದ್ಧತಿಯ ಮೇರೆಗೆ ಜನನದಿಂದ ಮರಣದ ವರೆಗೆ ಲೆಕ್ಕತೆಗೆದುಕೊಂಡು ಆ ಕೆಲಸ ಸಾಗಿಸಬೇಕು. ನಯೀ ತಾಲೀಮಿಗೆ ಹಿಂದುಸ್ತಾನಿ ತಾಲಿಮೀಸಂಘವು ಹಾದಿ ಹಾಕಿಕೊಟ್ಟಿದೆ.

೮ ಸಿದ್ಧವಾದ ಮತದಾರರ ಪಟ್ಟಿಯಲ್ಲಿ ತಪ್ಪಿ ಹೋದ ಹೆಸರುಗಳನ್ನು ನ್ಯಾಯವಾಗಿ ಸೇರಿಸುವ ವ್ಯವಸ್ಥೆ ಮಾಡಬೇಕು.

೯. ಕಾಯಿದೆ ಪ್ರಕಾರ ಯೋಗ್ಯತೆ ಪಡೆಯದವರಿಗೆ ಅದನ್ನು ಪಡೆಯಲು ಪ್ರೋತ್ಸಾಹಿಸಿ ತನ್ಮೂಲಕ ಮತದ ಹಕ್ಕು ದೊರೆವಂತೆ ಮಾಡಬೇಕು

೧೦. ಆಗಾಗ ಸೇರಿಸತಕ್ಕ ಮೇಲಿನ ಮತ್ತು ಇತರ ಉದ್ದೇಶಗಳಿಗಾಗಿ ಕರ್ತವ್ಯ ನಿರ್ವಹಿಸಲು ಸಂಘ ವಿಧಿಸಿದ ನಿಯಮಗಳನುಸಾರ ತನ್ನನ್ನು ಅವನು ತರಬೇತು ಮಾಡಿಕೊಳ್ಳಬೇಕು.

ಸಂಘವು ಈ ಕೆಳಗಿನ ಸ್ವಯಂ ಆಡಳಿತ ಸಾಗಿಸುವ ಸಮಿತಿಗಳನ್ನು ಸೇರಿಸಿಕೊಳ್ಳಬೇಕು.

೧. ಅ. ಭಾ. ನೂ. ಸಂಘ.
೨. ಅ. ಭಾ. ಗ್ರಾ. ಸಂಘ.
೩. ಹಿಂ. ತಾಲಿಮೀ ಸಂಘ.
೪. ಹರಿಜನ ಸೇವಕ ಸಂಘ.
೫. ಗೋಸೇವಾ ಸಂಘ.

## ಹಣಕಾಸು

ತನ್ನ ಉದ್ದೇಶವನ್ನೀಡೇರಿಸಲು ಸಂಘವು ಹಣವನ್ನು ಹಳ್ಳಿಗರಿಂದಲೂ ಇತರರಿಂದಲೂ ಎತ್ತಬೇಕು; ಬಡವನ ಕಾಸನ್ನು ಒಟ್ಟು ಮಾಡುವದರ ಮೇಲೆ ವಿಶೇಷ ಲಕ್ಷ್ಯವಿಡಬೇಕು.

ಹೊಸದಿಲ್ಲಿ, ೨೯—೧—೪೮

ಮೋ. ಕ. ಗಾಂಧಿ.

# ಕಾಂಗ್ರೆಸಿನ ಹೊಸ ಘಟನೆ

## ಗ್ರಾಮ ಪಂಚಾಯತಿಯ ಪುನರುಜ್ಜೀವನ

ಕಾಂಗ್ರೆಸ ಕಾರ್ಯಕಾರೀ ಸಮಿತಿಯು ಒಪ್ಪಿದ ಕಾಂಗ್ರೆಸಿನ ಹೊಸ ಘಟನೆಯು ಅ. ಭಾ. ಕಾಂ. ಸಮಿತಿಯ ಸಭೆಯಲ್ಲಿ ಮಂಡಿಸಲ್ಪಟ್ಟು ಸ್ವೀಕೃತವಾಗಿದೆ. ಅದರ ಪೂರ್ತಿ ಪಾಠ ಹೀಗಿದೆ–

ಭಾರತೀಯರ ನೆಮ್ಮದಿ ಮತ್ತು ಪ್ರಗತಿಗಳನ್ನು ಸಾಧಿಸಿ ಸರ್ವರಿಗೂ ಸಮಾನ ಸೌಕರ್ಯವುಳ್ಳ, ರಾಜಕೀಯ, ಆರ್ಥಿಕ ಸಾಮಾಜಿಕ ರಂಗಗಳಲ್ಲಿ ಸರ್ವರಿಗೂ ಸಮಾನ ಅಧಿಕಾರ ಉಳ್ಳ ಸಹಕಾರೀ ಆಡಳಿತವನ್ನು ಸ್ಥಾಪಿಸಿ ಜಗತ್ತಿನಲ್ಲಿ ಶಾಂತಿ, ಬಾಂಧವ್ಯಗಳನ್ನು ಸಾಧಿಸುವದೇ ಕಾಂಗ್ರೆಸಿನ ಉದ್ದೇಶವಾಗಿದೆ.

ಕಾಂಗ್ರೆಸಿನ ಧ್ಯೇಯಗಳನ್ನು ಒಪ್ಪಿಕೊಳ್ಳುವ ೧೮ ವರ್ಷದ ಮೇಲಿನ ಯಾವ ವ್ಯಕ್ತಿಗೂ ಕಾಂಗ್ರೆಸಿನ ಮೂಲ ಪಂಚಾಯತಿಯ ಆಯ್ಕೆಯ ಕಾಲಕ್ಕೆ ಮತಾಧಿಕಾರವಿರುತ್ತದೆ.

ಹಳ್ಳಿಯಲ್ಲಿ ಅಥವಾ ಹಳ್ಳಿಗಳ ಗುಂಪುಗಳಲ್ಲಿ ಇಲ್ಲವೆ ನಗರದ ಭಾಗದಲ್ಲಿ ಕಾಂಗ್ರೆಸಿನ ಮೂಲ ಪಂಚಾಯತಿಯಿರಬಲ್ಲದು. ಈ ಮೂಲ ಪಂಚಾಯತಿಗಳ ಸದಸ್ಯರನ್ನು ಆರಿಸುವದಕ್ಕಾಗಿ ದೇಶವನ್ನು ಯೋಗ್ಯವಾದ ರೀತಿಯಲ್ಲಿ ಒಡೆದು ಹಾಕಲಾಗುವದು. ಈ ಮೂಲ ಪಂಚಾಯತಿಯಲ್ಲಿ ಸುಮಾರು ೫೦೦ ಜನರಿಗೆ ಒಬ್ಬ ಸದಸ್ಯನಂತೆ ಸದಸ್ಯರು ಇರಬೇಕು. ಯಾವುದೊಂದು ಪಂಚಾಯತಿಯಲ್ಲಿ ಐದಕ್ಕಿಂತ ಕಡಿಮೆ ಸದಸ್ಯರಿರಬಾರದು.

ಈ ಮೂಲ ಪಂಚಾಯತಿಗೆ ಉಮೇದವಾರನಾಗುವವನು ಶುದ್ಧ ಖಾದೀ ಧಾರಿಯಾಗಿರಬೇಕು ಮಾದಕ ಪೇಯಗಳನ್ನು ಮುಟ್ಟಕೂಡದು. ಯಾವದೇ ವಿಧದ ಅಸ್ಪೃಶ್ಯತೆಯನ್ನು ಒಪ್ಪಬಾರದು. ಜಾತೀಯ ಐಕ್ಯವನ್ನು ನೆಚ್ಚುವವನಾಗಬೇಕು.

ಮೂಲ ಪಂಚಾಯತಿಯ ಸದಸ್ಯರು ತಲಾ ಒಂದು ರೂ. ಯ ವಾರ್ಷಿಕ ವಂತಿಗೆ ಸಲ್ಲಿಸಬೇಕು. ಹುರಿಯಾಳಾಗಿರುವವರು ಒಂದು ರೂ. ಶುಲ್ಕ ಕೊಡಬೇಕು. ಆರಿಸಿ ಬಂದ ಸದಸ್ಯರು ತಮ್ಮ ಸದಸ್ಯತ್ವದ ಒಂದು ವರುಷದ ಅವಧಿಯಲ್ಲಿ ವಂತಿಗೆ ಕೊಡಬೇಕಾಗಿಲ್ಲ.

ಮೂಲಪಂಚಾಯತಿಗಳ ಸದಸ್ಯರು ಕಾಂಗ್ರೆಸಿಗೆ ತಮ್ಮ ಪ್ರತಿನಿಧಿಗಳನ್ನು ಆರಿಸಿ ಕಳಿಸಬೇಕು. ಈ ಪ್ರತಿನಿಧಿಗಳು ಸೇರಿ ಪ್ರಾಂತಿಕ ಕಾಂಗ್ರೆಸ ಸಮಿತಿಗಳು ರಚಿತವಾಗುವವು, ಈ ಪ್ರತಿನಿಧಿಗಳು ತಮ್ಮ ಈ ಸ್ಥಾನದ ಅಧಿಕಾರದಿಂದ ಜಿಲ್ಲಾ ಮತ್ತು ತಾಲೂಕ ಕಾಂಗ್ರೆಸ ಸಮಿತಿಗಳ ಸದಸ್ಯರಾಗುವರು.

ಪ್ರತಿಯೊಂದು ಪ್ರಾಂತವು ಲಕ್ಷಕ್ಕೊಬ್ಬನಂತೆ ಕಾಂಗ್ರೆಸ ಪ್ರತಿನಿಧಿಗಳನ್ನು ಕಳಿಸಬಲ್ಲದು.

ಸಕ್ರಿಯ ಸದಸ್ಯರು ಮೊದಲನೆಯದಾಗಿ ಸದಾ ಶುದ್ಧ ಖಾದೀಧಾರಿಗಳಾಗಿರಬೇಕು, ಮಾದಕ ದ್ರವ್ಯಗಳನ್ನು ಮುಟ್ಟಬಾರದು, ಜಾತೀಯ ಐಕ್ಯವನ್ನು ನೆಚ್ಚುವವರಾಗಿ ಸರ್ವ ಧರ್ಮಸಹಿಷ್ಣುಗಳಾಗಿರಬೇಕು. ಜಾತಿ ಲಿಂಗಭೇದವೆಣಿಸದೆ ಸರ್ವರಿಗೂ ಸಮಾನ ಸೌಕರ್ಯಗಳಿವೆಯೆಂಬುದನ್ನು ಒಪ್ಪುವವರಾಗಿರಬೇಕು, ಎರಡನೆಯದಾಗಿ ಅವರು ಕಾಂಗ್ರೆಸು ಆಗಾಗ ಹಾಕಿಕೊಡುವ ರಾಷ್ಟ್ರೀಯ ಮತ್ತು ವಿಧಾಯಕ ಕಾರ್ಯಕ್ರಮಗಳಲ್ಲಿ ಒಂದರಲ್ಲಿ ಆದರೂ ನಿಯಮಿತತನದಿಂದ ಭಾಗವಹಿಸುತ್ತಿರಬೇಕು. ಮತ್ತು ಈ ಬಗ್ಗೆ ಪತ್ರಿಕಾ ಪ್ರತಿಜ್ಞೆಗೆ ಸಹಿಹಾಕಬೇಕು.

ಎಲ್ಲ ಕಾಂಗ್ರೆಸ ಸಮಿತಿಗಳಿಗೆ ಹುರಿಯಾಳಾಗಿ ನಿಲ್ಲಲು ಸಕ್ರಿಯ ಸದಸ್ಯರಿಗಷ್ಟೇ ಅಧಿಕಾರವಿದೆ ಆದರೆ ಮೂಲ ಪಂಚಾಯತಿಗೆ ಹುರಿಯಾಳಾಗಬಹುದಾದವರ ಶರಾರುಗಳನ್ನು ಆ ಸಂದರ್ಭದಲ್ಲಿಯೇ ಹೇಳಲಾಗಿದೆ.

ಮೂಲ ಪಂಚಾಯತಿಯನ್ನೊಳಗೊಂಡ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿರುವವರು ಬೇರೆ ಕಾರ್ಯಕ್ರಮವನ್ನಿಟ್ಟುಕೊಂಡ ಭಿನ್ನ ಘಟನೆಯ ಸಂಘ ಸಂಸ್ಥೆಗಳ ಸದಸ್ಯರಾಗಬಾರದು.

ಮೂಲ ಪಂಚಾಯತಿಯು ಮತ್ತು ಇತರ ಕಾಂಗ್ರೆಸ ಸಮಿತಿಗಳ ಜೀವಾವಧಿ ಸಾಮಾನ್ಯವಾಗಿ ಮೂರು ವರ್ಷಗಳದ್ದಾಗಿದೆ.'

ಹಿಂದೀ ಒಕ್ಕೂಟಕ್ಕೆ ಸೇರಿದ ಸಂಸ್ಥಾನಗಳನ್ನು ಕಾಂಗ್ರೆಸ ಸಂಸ್ಥೆಯು ಹಿಂದುಸ್ತಾನದ ಇತರ ವಿಭಾಗಗಳಂತೆಯೇ ನಡೆಸಿಕೊಳ್ಳುವದು. ಕಾರ್ಯಸಮಿತಿಯು ತನಗೆ ಉಚಿತವೆನಿಸಿದಂತೆ ಇವನ್ನು ಹೊಸ ಪ್ರಾಂತವಾಗಿಸಬಹುದು. ಇಲ್ಲವೆ ಇದ್ದ ಪ್ರಾಂತಗಳಲ್ಲಿ ಹಂಚಿಕೊಡಬಹುದು.

ಕಾಂಗ್ರೆಸಿನ ಕಾರ್ಯಕ್ಷೇತ್ರವು ಹಿಂದುಸ್ತಾನವಾಗಿದ್ದು ಅದರಲ್ಲಿ ಈ ಕೆಳಗಿನ ಪ್ರಾಂತಗಳನ್ನು ನಿರ್ಮಿಸಲಾಗಿದೆ.

ಅಜಮೀರ—ಮೇವಾಡ, ಆಂಧ್ರ, ಆಸಾಮು, ದಿಲ್ಲಿ, ಗುಜರಾತ, ಕರ್ನಾಟಕ, ಕೇರಳ, ಮಹಾಕೋಸಲ, ಮಹಾರಾಷ್ಟ್ರ, ಬಿಹಾರ, ಪಶ್ಚಿಮ ಬಂಗಾಲ, ಮುಂಬಯಿ ನಗರ, ನಾಗಪುರ, ಪೂರ್ವಪಂಜಾಬ, ತಮಿಳುನಾಡು, ಸಂಯುಕ್ತ ಪ್ರಾಂತ, ಉತ್ಕಲ, ವಿದರ್ಭ ಮತ್ತು ಇನ್ನು ಮೇಲೆ ಪ್ರಾಂತಗಳಾಗಲಿರುವ ಸಂಸ್ಥಾನ ಪ್ರದೇಶಗಳು.

ಕಾಂಗ್ರೆಸಿನ ಬಹಿರಂಗ ಅಧಿವೇಶನವು ಪ್ರತಿವರ್ಷ ಸೇರತಕ್ಕದ್ದು.

ಕಾಂಗ್ರೆಸು ಈ ಕೆಳಗಿನ ಸ್ವಾಯತ್ತ ಸಂಸ್ಥೆಗಳನ್ನು ತನ್ನಲ್ಲಿ ಸೇರಿಸಿಕೊಂಡಿದೆ.

ಅ. ಭಾ. ಚರಕಸಂಘ, ಅ. ಭಾ. ಗ್ರಾಮೋದ್ಯೋಗ ಸಂಘ ಹಿಂದುಸ್ತಾನಿ ತಾಲಿಮಿ ಸಂಘ, ಹರಿಜನಸೇವಕ ಸಂಘ, ಗೋಸೇವಾ ಸಂಘ.

ಕಾಂಗ್ರೆಸ ಕಾರ್ಯಕರ್ತರು ಮತ್ತು ಕಾಂಗ್ರೆಸ ಸಮಿತಿಗಳು ಕೈಕೊಳ್ಳಬೇಕಾದ ಕಾರ್ಯವನ್ನು ಕಾರ್ಯಸಮಿತಿಯು ಹಾಕಿಕೊಡುವದು.

# ಮದ್ರಾಸ ಪ್ರಾಂತ್ಯದ ಕನ್ನಡಿಗರ ಪರವಾಗಿ ಶಿಷ್ಟಮಂಡಲ

ಡಾ. ಯು. ಕೃಷ್ಣರಾಯರು, ಡಾ. ಎಚ್. ಎಂ. ರಾಯರು, ಶ್ರೀಗಳಾದ ಎಂ. ಎಂ. ಭಟ್ಟರು ವಿಠ್ಠಲರಾಯರು, ಎಂ. ಕೆ. ಧನಪತಿ ಇವರುಗಳನ್ನೊಳಗೊಂಡ ಮದ್ರಾಸ ಪ್ರಾಂತದ ಕನ್ನಡಿಗರ ಶಿಷ್ಟಮಂಡಳಿಯೊಂದು ಮದ್ರಾಸು ಸರಕಾರದ ಮಾನ್ಯ ವಿದ್ಯಾಮಂತ್ರಿಗಳಾದ ಶ್ರೀ. ಅವಿನಾಶಲಿಂಗಂ ಚೆಟ್ಟಿಯಾರರವರನ್ನು ಭೇಟಿಯಾಗಿ ಈ ಕೆಳಗಿನ ಅಂಶಗಳನ್ನು ಅವರ ಅವಗಾಹನೆಗೆ ತರಲಾಯಿತು

೧. ಬಿ. ಎ. ಮತ್ತು ಇತರೆ ಉಚ್ಚ ತರಗತಿಗಳಲ್ಲಿ ಕನ್ನಡದ ವಿಶೇಷ ಅಭ್ಯಾಸಕ್ಕೆ ( ಗ್ರೂಪV ಬಿ, ಎ ಬಿ. ಓ. ಎಲ್. ಇತ್ಯಾದಿ ) ವ್ಯವಸ್ಥೆ ಮಾಡಿಸುವುದು.

೨. ಮಂಗಳೂರಿನ ಗವರ್ನಮೆಂಟ ಕೋಲೇಜನ್ನು ಎರಡನೇ ತರಗತಿಯಿಂದ ಒಂದನೇ ತರಗತಿಗೆ ಏರಿಸುವುದು.

೩. ಮಂಗಳೂರಲ್ಲೊಂದು ಬಿ. ಟಿ. ಕೋಲೇಜನ್ನು ಸ್ಥಾಪಿಸುವುದು.

೪. ಮದ್ರಾಸಿನ ಕ್ವೀನ್ ಮೇರಿಸ್ ಕೋಲೇಜಿನಲ್ಲಿ ಇಂಟರ್‌ಮೀಡಿಯೇಟ್ ಬಿ. ಎ. ತರಗತಿಗಳಲ್ಲಿ ಈಗ ತೆಗೆದುಹಾಕಲ್ಪಟ್ಟ ಕನ್ನಡಕ್ಕೆ ಪುನಃ ಸ್ಥಾನವನ್ನು ಒದಗಿಸುವುದು.

ಮಾನ್ಯ ಮಂತ್ರಿಗಳು ಮೇಲಿನ ಅಂಶಗಳನ್ನು ಕೇಳಿ ತಿಳಿದುಕೊಂಡು ಮೇಲಿನ ಬೇಡಿಕೆಗಳಿಗೆ ಈ ಕೆಳಗಿನ ವ್ಯವಸ್ಥೆ ಮಾಡಿಸುವುದಾಗಿಯೂ ಭರವಸೆ ಕೊಟ್ಟರು.

೧ ಮತ್ತು ೨. ಪ್ರಸ್ತುತ ಮಂಗಳೂರಿನ ಗವರ್ನಮೆಂಟು ಕೋಲೇಜಿನಲ್ಲಿ ಬಿ. ಎ. ಮುಂತಾದ ಕ್ಲಾಸುಗಳನ್ನು ತೆರೆಯಲು ಕಟ್ಟಡಗಳ ಅಭಾವವಿರುವದರಿಂದ ಅಲ್ಲಿನ ಹೈಸ್ಕೂಲು ತರಗತಿಗಳನ್ನು ಮುಚ್ಚಿದಲ್ಲಿ ಯಾವ ಕಷ್ಟವೂ ಇಲ್ಲದೆ ಒಂದನೇ ತರಗತಿಯ ಕೋಲೇಜನ್ನು ಮಾಡಿಸಬಹುದೆಂದರು.

ಬಿ. ಟಿ. ಕೋಲೇಜನ್ನು ತೆರೆಯಲು ಬಹಳ ದ್ರವ್ಯಬೇಕಾಗುವದರಿಂದ ಸದ್ಯಕ್ಕೆ ಮದ್ರಾಸಿನಲ್ಲಿರುವ ಗವರ್ನಮೆಂಟು ಟ್ರೈನಿಂಗ್ ಕೋಲೇಜಿನಲ್ಲಿ ಕನ್ನಡ ಶಿಕ್ಷಣ ಕ್ರಮಕ್ಕೆ ( Methods ) ತಕ್ಕ ವ್ಯವಸ್ಥೆಯನ್ನು ಮಾಡಿಸಿ ಅಲ್ಲಿಯ B. T. ವಿದ್ಯಾರ್ಥಿಗಳಿಗೆ ಕ್ರಿಶ್ಚಿಯನ್ ಕೋಲೇಜ್ ಸ್ಕೂಲಿನಲ್ಲಿರುವ ಕನ್ನಡಮಾಧ್ಯಮ ಕ್ಲಾಸುಗಳಲ್ಲಿ ಅಭ್ಯಾಸವನ್ನು ಕೊಡಿಸಬಹುದು ಎಂದರು. ಈ ಸಂದರ್ಭದಲ್ಲಿ ಕನ್ನಡ ಅಧ್ಯಾಪಕರ ಪೈಕಿ ಒಂದು ಸ್ಥಾನವು M. E. S. ಶ್ರೇಣಿಯಲ್ಲಿ ಇದೇ ಮಾರ್ಚ 1948 ನೇ ಜೂಲೈ ತಿಂಗಳಿಂದ ಇಡಿಸಲಾಗುವದೆಂದು ಆಶ್ವಾಸನ ಕೊಟ್ಟರು.

ಕನಿಷ್ಠ ಪಕ್ಷಕ್ಕೆ ೩೮ ಮಂದಿ ಕನ್ನಡ ವಿದ್ಯಾರ್ಥಿನಿಯರು ಬಂದರೆ ಕ್ವೀನ್ ಮೇರೀಸ್ ಕೋಲೇಜಿನಲ್ಲಿ ಕನ್ನಡ ಕ್ಲಾಸುಗಳನ್ನು ತೆರೆಯಲಾಗುವದು. ಇಲ್ಲವಾದರೆ, ಅದು ಅಸಾಧ್ಯವೆಂದರು.

ಮದ್ರಾಸು ಪ್ರಾಂತ್ಯದ ಕನ್ನಡಿಗರು ಇಷ್ಟರಲ್ಲಿ ತೃಪ್ತಿಹೊಂದದೆ ಈ ಭರವಸೆಗಳು ಕಾರ್ಯರೂಪಕ್ಕೆ ಬರುವ ತನಕ ಅನವರತ ಪತ್ರಿಕೆಗಳ ಮೂಲಕ, ಸಂಘಗಳ ಮೂಲಕ ನಮ್ಮ ಬೇಡಿಕೆಗಳ ಸಲುವಾಗಿ ವಿಶೇಷ ಚಳವಳಿ ಹೂಡಬೇಕು.

# ಮಹಾತ್ಮಾ ಗಾಂಧಿ ಮತ್ತು ಜಾನ್ ರಸ್ಕಿನ್

[ ೭ನೆಯ ಪುಟದಿಂದ ]

ರೂಪಿಸುತ್ತೇನೆ. ಆದರೆ ಒಂದು ಜೀವಂತ ಭಾವನೆಯನ್ನು ಬೆಳಗಿಸುವುದು, ಬಲಪಡಿಸುವುದು, ಸಂಸ್ಕರಿಸುವುದು, ಯಳ ರೂಪಿಡುವುದು, ಲಾಭದಾಯಕವೆಂದು ಯಾರೂ ಎಣಿಸುವುದಿಲ್ಲ" ಎಂಬುದಕ್ಕಿಂತ ಹೆಚ್ಚಿನ ಆದರ್ಶ ಯಾವುದೂ ದುಡಿಯುವ ಮನುಷ್ಯನ ವಿಷಯವಾಗಿ ಹೇಳಿಲ್ಲ. ಮಾತುಗಳು "ಕಡೆಯ ತನಕ" ಎಂಬುದರಿಂದ ತೆಗೆದವಲ್ಲ; "ವೆನಿಸ್ ನಗರದ ಕಲ್ಲುಗಳು" ಎಂಬ ಗ್ರಂಥದಿಂದ ಉದ್ಧರಿಸಿದವು.

ಈ ಗ್ರಂಥವನ್ನು ಗಾಂಧಿಯವರು ಓದಿಲ್ಲ. ಆದರೆ ಅವರು ತಮ್ಮ ಇಡಿ ಬಾಳನ್ನೇ ಈ ಶಬ್ದಗಳಿಂದ ಬಣ್ಣಿಸಲ್ಪಟ್ಟ ಆಶಗಳ ತಯಾರಿಕೆಗಾಗಿ ಸವೆಸಿದರು.

## ರಸ್ಕಿನ್ನನ ದುರಂತ

ಅವರು ಶ್ರಮ ಅಥವಾ ದುಡಿಮೆಗೆ ಸಂಬಂಧಿಸಿದವರನ್ನು ಸಂಘಟಿಸಿದ ಬಗ್ಗೆ ಭಾರತವನ್ನು ಪಾವನಗೊಳಿಸಲು ಹೆಂಗಸರನ್ನು ಉನ್ನತಸ್ಥಾನಕ್ಕೊಯ್ಯಲು, ಮಕ್ಕಳಿಗೆ ಶಿಕ್ಷಣಕೊಡಲು ಪ್ರಯತ್ನಿಸಿತು. ನಾಡ ಹೆಜ್ಜೆಗಂಡರುಗಳನ್ನು ಮುಟ್ಟಿದ ಅವರ ಈ ಮಾರ್ಗವು ತನ್ನ ಶಿಕ್ಷಾರ್ಥವಂಥ ಅಚ್ಚನ್ನೊತ್ತಿಬಿಟ್ಟಿದೆ. ದೇಶಬಂಧು ದಾಸ, ಜವಾಹರಲಾಲ, ರಾಜಾಜಿ, ವಲ್ಲಭಭಾಯಿ ಇವರಿಂದ ಹಿಡಿದು ಹಳ್ಳಿಯ ಅತಿ ಕೆಳಗಿನ ಕೆಲಸಗಾರನವರೆಗೂ. ಸರೋಜಿನಿದೇವಿಯಿಂದ ಹಿಡಿದು ಮೃದುಲಾಬೆನ್ನರವರೆಗೂ ಅಸಂಖ್ಯಾತ ಭಾರತ ಜಾಗರಿತವಿಸಿದ ಸ್ತ್ರೀ ಪುರುಷರ ಜೀವನಗಳು ಅತ್ರಮುಕ್ತ ಸ್ಪಷ್ಟ ನಿದರ್ಶನಗಳಾಗಿವೆ. ರಸ್ಕಿನ್ನನದು ಕಾರ್ಯದಲ್ಲಿ ಪ್ರವೃತ್ತಿ ಹುಟ್ಟಿಸುವ ಇಚ್ಛಾಶಕ್ತಿಯಿಲ್ಲದ, ತನನ್ನು ಹಿಡಿದ ಕೆಲಸದಲ್ಲಿ ತೋರಿಕೆಯ ಅಜಯ್ಯ ವೈಷಮ್ಯಗಳನ್ನು ಮೀರಿ ಮುಂದೊಯ್ಯಲಿಲ್ಲ ಒಬ್ಬ ಶಕ್ತಿಯೊಂದರಲ್ಲಿ ಇರಬೇಕಾದ ಶ್ರದ್ಧೆಯಿಲ್ಲದ ತನ್ನ ಸ್ವಭಾವವನ್ನರಿತುಕೊಂಡ ಪ್ರತಿಭಾಶಾಲಿಯ ದುರಂತವೆನಿಸಿತು. ಗಾಂಧಿಯವರ ಶಕ್ತಿ ಮತ್ತು ಆಯ್ಕೆಗಳು ಸಂಪೂರ್ಣ ಅನುಭಾವತ್ಯಾಗ ಮತ್ತು ಮಾನವರ ಮತ್ತು ಇತರ ವಸ್ತುಗಳ ಅದೃಷ್ಟವನ್ನು ರೂಪಿಸುವ ದೇವರಲ್ಲಿ ದೃಢವಾದ ಆತ್ಮಸಮರ್ಪಣೆಗಳಿಂದ ಬಂದವು. ಆದರೆ ರಸ್ಕಿನ್ನನ ದುರಂತವಾದರೂ ಅವನು ಮುಂದಿನ ಪೀಳಿಗೆಗಳಿಗಾಗಿ ಬಿಟ್ಟುಹೋದ ವಿಚಾರಗಳಿಂದ ಎಷ್ಟೋ ಕಡಿಮೆಯಾಗಿದೆ. ಏಕೆಂದರೆ ಅವರ ಅತ್ಯನ್ನ ಸಹಜೀವಿಗಳನ್ನು ಸೇವಿಸಬೇಕೆಂಬ ಅವನ ಪವಿತ್ರ ಧ್ಯೇಯದಿಂದ ಹುಟ್ಟಿದವೆನಿಸಿವೆ.

(ದಿ. ಮಹದೇವ ದೇಸಾಯಿಯವರಿಂದ)

# ಹಿರಿಯೋಲಗದಲ್ಲಿ ರೇಲ್ವೆ ಬೇಡಿಕೆಗಳ ಚರ್ಚೆ

## ರೇಲ್ವೆ ವಿಸ್ತರಣೆಗಾಗಿ ಬಿನ್ನಹ

ರೇಲ್ವೆ ಬೇಡಿಕೆಗಳ ಬಗ್ಗೆ ರೇಲ್ವೆ ಮಂತ್ರಿಗಳು ಹಿರಿಯೋಲಗದಲ್ಲಿ ಮಂಡಿಸಿದ ಸೂಚನೆಗಳ ಬಗ್ಗೆ ಶನಿವಾರ, ಸೋಮವಾರ, ಮಂಗಳವಾರ ಮೂರು ದಿನ ಚರ್ಚೆ ನಡೆದು ಅವೆಲ್ಲ ಮಾನ್ಯವಾದುವು. ಶನಿವಾರ ದಿನ ರೇಲ್ವೆ ಆಡಳಿತದ ಅಯೋಗ್ಯತೆಯನ್ನು ಚರ್ಚಿಸುವ ಕುರಿತು ಶ್ರೀ ರಾಮನಾಥ ಗೋಯೆಂಕಾರವರು ೧೦೦ ರೂ. ಕಡಿತದ ಸೂಚನೆಯನ್ನು ಮಂಡಿಸಿದರು ಪ್ಯಾಸೆಂಜರ ದರಗಳ ಅಶಾಸ್ತ್ರೀಯ ಕಳಪದಿ, ಮೂರನೇ ವರ್ಗದ ಪ್ರಯಾಣಿಕರ ಸಂಕಷ್ಟಗಳು ಮತ್ತು ರೇಲ್ವೆಗಳ ಪುನರ್ಘಟನೆ ಇವುಗಳನ್ನು ಕುರಿತು ಚರ್ಚಿಸಲು ಮತ್ತೆ ಮೂರು ಕಡಿತದ ಸೂಚನೆಗಳು ಮಂಡಿಸಲ್ಪಟ್ಟವು. ಆದರೆ ಚರ್ಚೆಯ ನಂತರ ಇವೆಲ್ಲ ಕಡಿತದ ಸೂಚನೆಗಳು ಹಿಂತೆಗೆದುಕೊಳ್ಳಲ್ಪಟ್ಟವು. ಮೂರನೇ ವರ್ಗದ ಪ್ರವಾಸಿಕರ ಸಂಕಷ್ಟಗಳನ್ನು ಚರ್ಚಿಸಲು ಶ್ರೀ ಆರ್. ಕೆ. ಸಿಧ್ವಾ ಇವರು ತಂದ ಕಡಿತದ ಸೂಚನೆಯ ಸಂಬಂಧದಲ್ಲಿ ಮಾನ್ಯ ಮಂತ್ರಿಗಳು ಉತ್ತರ ಕೊಡುತ್ತ ಸೂಚನೆಗಳನ್ನು ಕಾರ್ಯರೂಪಕ್ಕೆ ಇಳಿಸಲಾಗುವದೆಂದು ಹೇಳಬಯಸುತ್ತೇನೆ, ಮೊದಲನೇ ವರ್ಗವನ್ನು ತೆಗೆದೊಗೆವ ತತ್ವಕ್ಕೆ ರೇಲ್ವೆಗಳು ಒಪ್ಪಿವೆ. ಸುಧಾರಣೆ ಫಂಡಿನ ಹಣವನ್ನು ಮೊತ್ತಮೊದಲು ಮೂರನೇ ವರ್ಗದ ಸುಧಾರಣೆಗಾಗಿ ವಿನಿಯೋಗಿಸಲಾಗುವದೆಂದೂ ಮಂತ್ರಿಗಳು ಹೇಳಿದರು.

## ರೇಲ್ವೆಗಳ ವಿಸ್ತರಣ

ಸೋಮವಾರ ದಿನ ಚರ್ಚೆ ಮತ್ತೆ ಮುಂದೆ ಸಾಗಿತು. ಇಂದು ಒಟ್ಟಿಗೆ ೫ ಕಡಿತದ ಸೂಚನೆಗಳು ಮಂಡಿಸಲ್ಪಟ್ಟಿದ್ದವು. ಒಂದನೇದು ಹೊಗೆ ಬಂಡಿಗಳು ನಿರಂತರವಾಗಿ ತಡಮಾಡಿ ಓಡಾಡುತ್ತಿರುವದಕ್ಕೆ ಸಂಬಂಧಿಸಿತ್ತು. ಎರಡನೆಯದನ್ನು ಫ್ರ್ಯಾಂಕ ಆ್ಯಂಥನಿಯವರು ಸಿಲೆಕ್ಶನ್ ಪದ್ಧತಿಯನ್ನು ಚರ್ಚಿಸಲು ತಂದಿದ್ದರು. ಎಂಜಿನುಗಳನ್ನು ಬೇಗ ತಯಾರಿಸಬೇಕೆಂದು ಕೇಳಿಕೊಳ್ಳುವದು ಮೂರನೆಯ ಬೇಡಿಕೆಯಾಗಿತ್ತು. ಹೊಸ ಮಾರ್ಗಗಳ ರಚನೆ ಹಾಗು ಹಳೆ ಕಿತ್ತಿದ ಮಾರ್ಗಗಳನ್ನು ಮತ್ತೆ ಪ್ರಾರಂಭಿಸುವದು ನಾಲ್ಕನೆಯದು ಇದನ್ನು ಶ್ರೀ ರಂಗನಾಥ ದಿವಾಕರರು ತಂದಿದ್ದರು. ಸಂಬಳ ಸಮಿತಿಯ ಸೂಚನೆಗಳನ್ನು ರೇಲ್ವೆ ಬೋರ್ಡ ಸದಸ್ಯರು ಮತ್ತು ರೇಲ್ವೆ ಅಧಿಕಾರಿಗಳಿಗೂ ಅನ್ವಯಿಸಬೇಕೆಂಬ ಕೊನೆಯ ಸೂಚನೆಯನ್ನು ಖುರ್ಶೆದಲಾಲರು ತಂದಿದ್ದರು. ಇವೆಲ್ಲ ಸೂಚನೆಗಳು ಚರ್ಚೆಯ ನಂತರ ಹಿಂತೆಗೆದುಕೊಳ್ಳಲ್ಪಟ್ಟವು.

ಶ್ರೀ ದಿವಾಕರರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು.- ದೇಶದ ವೈಶಾಲ್ಯವನ್ನು ಹೊಸ ಗಾಡಿಗಳನ್ನು ಲಕ್ಷ್ಯಕ್ಕೆ ತಂದುಕೊಂಡಲ್ಲಿ ಸದ್ಯದ ಮುಂಗಡ ಪತ್ರಿಕೆಯಲ್ಲಿ ಕಾಣಿಸಿದ್ದಕ್ಕಿಂತ ದೊಡ್ಡ ಪ್ರಮಾಣದಲ್ಲಿ ಹೊಸ ಮಾರ್ಗಗಳನ್ನು ಹಾಕುವದು ಅವಶ್ಯ. ಪ್ರಮುಖ ಪಟ್ಟಣಗಳು ಮತ್ತು ಗಡಿಗಳಲ್ಲಿ ಮಹತ್ವದ ಸ್ಥಳಗಳನ್ನು ನೇರವಾಗಿ ಕೂಡಿಸಬೇಕು ಎಂದು ಎಂದರವರು. ಈ ವರೆಗೆ ದುರ್ಲಕ್ಷಿಸಲಾದ ದಕ್ಷಿಣ ಹಿಂದುಸ್ತಾನ ಮೊದಲಾದವುಗಳ ಕಡೆಗೆ ಹೆಚ್ಚಿಗೆ ಗಮನ ಕೊಡಬೇಕು. ಇಡೀ ಹಿಂದುಸ್ತಾನವನ್ನು ರೇಲ್ವೆಗಳಿಂದ ಕೂಡಿಸಬೇಕು. ಕಂಪನಿ ಆಡಳಿತದಲ್ಲಿಯ ಕಾಲದಲ್ಲಿದ್ದಂತೆ ರೇಲ್ವೆ ವಿಸ್ತಾರವು ಕೇವಲ ವ್ಯಾಪಾರೀ ಲಾಭಕ್ಕಾಗಿ ಇರತಕ್ಕದ್ದಲ್ಲ ನೈಸರ್ಗಿಕ ಸಂಪದ್ಯುಕ್ತ ಭಾಗಗಳಲ್ಲಿಯೂ ಈಗ ರೇಲ್ವೆ ವಿಸ್ತಾರ ಕೈಕೊಳ್ಳಲ್ಪಟ್ಟು ನಾಗರಿಕತೆಯನ್ನು ದೂರದವರೆಗೆ ಮುಟ್ಟಿಸಬೇಕು ಎಂದು ಮುಂತಾಗಿಯೂ ಅವರು ಹೇಳಿದರು. ಶ್ರೀ ಎಸ್. ವಿ. ಕೃಷ್ಣಮೂರ್ತಿಯವರು ಮಾತಾಡಿ ಪಶ್ಚಿಮ ಕರಾವಳಿಗುಂಟ ಮಂಗಳೂರಿಂದ ಮುಂಬಯಿಗೆ ಮಾರ್ಗ ಹಾಕುವದು ಹಾಸನ ಕುಳಗುಪ್ಪಾ ಹುಬ್ಬಳ್ಳಿ ಮಿರಜ ಮೊದಲಾದವುಗಳನ್ನು ಅದಕ್ಕೆ ಜೋಡಿಸುವದು. ಚಾಮರಾಜನಗರ ಹಾಗು ಸತ್ಯಮಂಗಲಂ ಮತ್ತು ಚಿತ್ರದುರ್ಗ ರಾಯದುರ್ಗ ರೇಲ್ವೆ ಹಾಕುವದು ಮೊದಲಾದವುಗಳನ್ನು ಅವರು ಸೂಚಿಸಿದರು. ಕರ್ಜತ ಹಾಗು ಕಲ್ಯಾಣ ನಡುವೆ ಈಗ ಹಾಕಲು ಯೋಜಿಸಿದ ಮಾರ್ಗವನ್ನು ಬಿಟ್ಟುಕೊಟ್ಟು ಪುಣೆಯಿಂದ ಮುಂಬಯಿಗೆ ಮೀಟರ ಗೇಜ ಮಾರ್ಗ ಹಾಕಿದಲ್ಲಿ ಮುಖ್ಯವಾಗಿ ಮೀಟರ ಗೇಜ ಮಾರ್ಗವುಳ್ಳ ದಕ್ಷಿಣ ಕಪ್ಪಲಿಗೆ ವಿಶೇಷ ಉಪಯೋಗವಾಗುವದೆಂದೂ ಅವರು ತಿಳಿಸಿದರು.

## ಒಕ್ಕಲತನ ಹುಟ್ಟುವಳಿಗೆ ಸೌಕರ್ಯ

ಮಂಗಳವಾರ ದಿನ ಪ್ರೊ. ರಂಗಾರವರು ಒಕ್ಕಲತನದ ಹುಟ್ಟುವಳಿ ವಿಶೇಷತಃ ಆಹಾರ ಪದಾರ್ಥಗಳ ಚಲನವಲನಕ್ಕಾಗಿ ವಿಶೇಷ ಸೌಕರ್ಯಗಳನ್ನೊದಗಿಸುವದನ್ನು ಚರ್ಚಿಸುವದಕ್ಕಾಗಿ ಕಡಿತದ ಸೂಚನೆ ಮಂಡಿಸಿದರು. ರೇಲ್ವೆಯಲ್ಲಿಯ ವಿದ್ಯುದ್ದೀಪಗಳ ಜೋಡಣೆಗಳ ಕಳವಿನ ಸಂಬಂಧದಲ್ಲಿ ಶ್ರೀ ಮೋಹನಲಾಲ ಸಕ್ಸೇನಾ ಇವರು ಅಯೋಧ್ಯಾ-ತಿರಹುತ ರೇಲ್ವೆ ಪರಿಸ್ಥಿತಿ ಸಂಬಂಧದಲ್ಲಿ ಪ್ರೊ. ಶಿಬನಲಾಲ ಸಕ್ಸೇನಾರವರು ಕಡಿತದ ಸೂಚನೆ ಮಂಡಿಸಿದರು. ಧಾನ್ಯದ ಅಂಗಡಿಗಳನ್ನು ರೇಲ್ವೆಯವರು ನಡೆಸುವದರ ಸಂಬಂಧದಲ್ಲಿ ಸ್ಪಷ್ಟೀಕರಣ ಮಾಡುತ್ತ ಆ ಪ್ರಕರಣ ಪಡೆಯುವದಕ್ಕಾಗಿ ತುಟ್ಟಿಭತ್ತೆ ಕೊಡದೆ ಧಾನ್ಯ ಕೊಡಲಾಯಿತೆಂದೂ ಈಗಲೂ ಸಂಬಳ ಸಮಿತಿಯವರು ಸೂಚಿಸಿದ ಭತ್ತೆಗಿಂತ ಧಾನ್ಯ ಕೊಡುವದು ರೇಲ್ವೆಗೇ ಲಾಭಕರವೆಂದೂ ಹೇಳಿದರು. ಧಾನ್ಯದ ಅಂಗಡಿಗಳಲ್ಲಿ ಆದ ಅಪನ್ಯಯದ ಬಗ್ಗೆ ಶ್ರೀ ಮೋಹನಲಾಲ ಸಕ್ಸೇನಾ ಕೆ. ಸಂತಾನಂ ಮತ್ತು ಖಂಡೂಭಾಯಿ ದೇಸಾಯಿಯವರ ವಿಚಾರಣಾ ಮಂಡಳವನ್ನು ನೇಮಿಸುವದಾಗಿ ಮಂತ್ರಿಗಳು ಹೇಳಿದರು. ಚರ್ಚೆಯ ನಂತರ ರೇಲ್ವೆ ಬೇಡಿಕೆಗಳೆಲ್ಲ ಒಪ್ಪಿತವಾದವು.

# ಹೈದರಾಬಾದ ಯಥಾಸ್ಥಿತಿ ಒಪ್ಪಂದದ ಭಂಗ

## ಹಿಂದುಸ್ತಾನ ಗೆಲ್ಲಲು ಸೈನ್ಯ

ಹಿಂದುಸ್ತಾನದ ಕೇಂದ್ರಶಾಸನ ಸಭೆಯಲ್ಲಿ ಪ್ರಶ್ನೋತ್ತರಗಳು ನಡೆದಾಗ ತಾ. ೨೩ ರಂದು ಸಂಸ್ಥಾನ ಖಾತೆಯ ಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರು, ಹೈದರಾಬಾದ ಸಂಸ್ಥಾನದೊಡನೆ ಯಥಾಸ್ಥಿತಿ ಒಪ್ಪಂದವನ್ನು ೧೯೪೭ ನವೆಂಬರ ೨೯ ರಿಂದ ಒಂದು ವರ್ಷದ ಮಟ್ಟಿಗೆ ಮಾಡಿಕೊಂಡಿರುವದಾಗಿ ಹೇಳಿದರು.

ಸೇಠ ಗೋವಿಂದದಾಸ- ಈ ಒಪ್ಪಂದದ ಕೆಲವು ಕಲಮುಗಳನ್ನು ನಿಜಾಮ ಸರಕಾರದವರು ಭಂಗಗೊಳಿಸಿಲ್ಲವೆ?

ಸರದಾರ ಪಟೇಲರು—ಹಿಂದುಸ್ತಾನ ಸರಕಾರದ ಅಭಿಪ್ರಾಯ ಹಾಗಿದೆ ನಿಜಾಮ ಸರಕಾರಕ್ಕೆ ಒಪ್ಪಂದದ ಭಂಗವಾಗುತ್ತಿದೆಯೆಂದು ತಿಳಿಸಲಾಗಿದೆ.

ಲಾಲಾ ದೇಶಬಂಧು ಗುಪ್ತ—ಒಪ್ಪಂದದ ಬಗ್ಗೆ ಹಿಂದುಸ್ತಾನ ಸರಕಾರ ಮತ್ತು ನಿಜಾಮ ಸರಕಾರದ ಪ್ರತಿನಿಧಿಗಳೊಡನೆ ಮಾತುಕತೆ ಸಾಗಿರುವವೆ?

ಸರದಾರ ಪಟೇಲ—ಸಾಗಿವೆ. ಈ ಮಾತುಕತೆ ನಡೆಸಲು ನಿಜಾಮರಿಂದ ಶಿಷ್ಟಮಂಡಲ ಬಂದಿದೆ.

ಪ್ರಶ್ನೆ— ಗಡಿ ಪ್ರದೇಶದ ಸಂರಕ್ಷಣೆಯ ಬಗ್ಗೆ ಒಪ್ಪಂದದಲ್ಲಿ ಕರಾರುಗಳಾಗಿವೆಯೆ ?

ಉತ್ತರ— ಕೇವಲ ಗಡಿ ಪ್ರದೇಶವೇ ಏಕೆ? ಇಡೀ ಸಂಸ್ಥಾನ ಹಾಗೂ ಅದರ ಸುತ್ತುಮುತ್ತಲಿನ ಪ್ರದೇಶದ ಸಂರಕ್ಷಣೆಯ ವಿಷಯವಾಗಿ ಒಪ್ಪಂದ ಮಾಡಿಕೊಳ್ಳಲಾಗಿದೆ.

ಪ್ರಶ್ನೆ- ಹೈದರಾಬಾದ ಸಂಸ್ಥಾನದಲ್ಲಿ ಅಶಾಂತಿ ಹಬ್ಬಿದೆ ಎಂಬ ಸುದ್ದಿಯಲ್ಲಿ ಸತ್ಯಾಂಶ ಉಂಟೆ?

ಉತ್ತರ—ಹೈದರಾಬಾದದಲ್ಲಿ ಹೊಣೆಗಾರ ಸರಕಾರ ಸ್ಥಾಪಿತವಾಗುವವರೆಗೆ ಅಶಾಂತಿ ಇರುವದು ಸ್ವಾಭಾವಿಕವಾಗಿದೆ.

ದೇಶಬಂಧು ಗುಪ್ತರ ಪ್ರಶ್ನೆಗೆ ಉತ್ತರ ಕೊಡುತ್ತ ಕೇಂದ್ರ ಶಾಸನ ಸಭೆಯಲ್ಲಿ ಮುಖ್ಯ ಮಂತ್ರಿ ಪಂಡಿತ ನೆಹರು ಅವರು ಹೀಗೆ ಹೇಳಿದರು.

ಪಾಕಿಸ್ತಾನದ ಉರ್ದು ಪತ್ರಿಕೆಗಳಲ್ಲಿ ಹಿಂದುಸ್ತಾನವನ್ನು ಗೆಲ್ಲುವ ಕೂಗು ಎದ್ದದ್ದೂ ಗುಡ್ಡಗಾಡ ಜನರೂ ಮತ್ತು ಇತರರೂ ಪಾಕಿಸ್ತಾನ ಸೈನ್ಯದಲ್ಲಿ ಸೇರಬೇಕೆಂದು ಪತ್ರಿಕೆಗಳಲ್ಲಿ ನಡೆದ ಪ್ರಚಾರದ ವಿಷಯವೂ ಹಿಂದುಸ್ತಾನ ಸರಕಾರಕ್ಕೆ ತಿಳಿದು ಬಂದಿದೆ. ಇಂತಹ ಪತ್ರಿಕೆಗಳು ಅಂಚೆಯ ಮೂಲಕ ಪಾಕಿಸ್ತಾನದಿಂದ ಹಿಂದುಸ್ತಾನದ ಕೆಲವು ಜನರಿಗೆ ಬರುತ್ತಿವೆ. ಈ ಬಗೆಯ ಅನಿಷ್ಟ ಪತ್ರಿಕೆಯ ನಿಯಂತ್ರಣಾಧಿಕಾರವು ಪ್ರಾಂತಿಕ ಸರಕಾರಗಳಿಗೆ ಇರುವ ಮೂಲಕ ಕೇಂದ್ರ ಸರಕಾರವು ಈ ವಿಷಯದಲ್ಲಿ ಕೈ ಹಾಕಿಲ್ಲ.

ಹಿಂದುಸ್ತಾನಿ ಭಾಷೆ ತಿಳಿಯದ ಕೆಲ ಸದಸ್ಯರು ಮೌಲಾನಾ ಆಜಾದರು ಕೊಡುವ ಹಿಂದುಸ್ತಾನಿ ಉತ್ತರಗಳು ತಮಗೆ ತಿಳಿವುದಿಲ್ಲವೆಂದು ದೂರಿಕೊಂಡರು ಅದಕ್ಕೆ ಅಧ್ಯಕ್ಷರಾದ ಶ್ರೀ ಮಾಳವಣಕರರು ಹಿಂದುಸ್ತಾನಿ ಭಾಷೆಯನ್ನು ತಿಳಿದುಕೊಳ್ಳಲು ಎಲ್ಲ ಸದಸ್ಯರು ಮನ ಮುಟ್ಟಿ ಪ್ರಯತ್ನಿಸಬೇಕೆಂದೂ ಇನ್ನು ಮುಂದೆ ಸಭೆಯ ಕಾರ್ಯಕಲಾಪಗಳೆಲ್ಲ ಹಿಂದುಸ್ತಾನಿಯಲ್ಲಿಯೇ ನಡೆಯಬೇಕಾದುದು ಯುಕ್ತವಾದ ಕಾರಣ ಈ ಭಾಷೆ ಕಲಿವುದು ಸಭಿಕರ ಆದ್ಯ ಕರ್ತವ್ಯವೆಂದೂ ತಿಳಿಹೇಳಿದರು.

# ಮುಂಬಯಿ ಶಾಸನ ಸಭೆ

ತಾ ೨೫ರ ಮುಂಬಯಿ ಶಾಸನ ಸಭೆಯಲ್ಲಿ ವರದಕ್ಷಿಣೆ ಕೊಡುವದು ಹಾಗೂ ತೆಗೆದುಕೊಳ್ಳುವದು ಅಪರಾಧವೆಂದು ಸಾರುವ ಮಸೂದೆಯನ್ನು ಪರಿಶೀಲಕ ಸಮಿತಿಗೆ ಕಳಿಸಬೇಕೆಂದು ನಿರ್ಧರಿಸಲಾಯಿತು.

ಶ್ರೀಮತಿ ಲೀಲಾವತಿ ಮುನಶಿಯವರು ಶಾಸನ ಸಭೆಯಲ್ಲಿ ಇಲ್ಲದ್ದರಿಂದ ಅವರು ಮಂಡಿಸಬೇಕಾಗಿದ್ದ ವಿಷಮ ವಿವಾಹ ನಿರೋಧಕ ಮಸೂದೆ ಮತ್ತು ಬಾಲ್ಯವಿವಾಹ ನಿರೋಧಕ ಮಸೂದೆ ಇವನ್ನು ಮುಂದೂಡಲಾಯಿತು.

## ಕರ್ನಾಟಕದಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯ

ಮುಖ್ಯ ಮಂತ್ರಿಗಳಾದ ಶ್ರೀ ಬಾಳಾಸಾಹೇಬ ಖೇರರು ಒಂದು ಪ್ರಶ್ನೆಗೆ ಉತ್ತರ ಕೊಡುತ್ತ ಕರ್ನಾಟಕದಲ್ಲಿ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸುವ ಯೋಜನೆಯ ಬಗ್ಗೆ ಸರಕಾರವು ವಿಚಾರ ನಡೆಸಿದೆಯೆಂದು ಹೇಳಿದರು.

ಮುಖ್ಯ ಮಂತ್ರಿಗಳು ಈ ಬಗ್ಗೆ ಮಾತನಾಡುತ್ತ ಕರ್ನಾಟಕ ಪ್ರಾಚ್ಯವಸ್ತು ಸಂಶೋಧನೆಯವರ ಕಾರ್ಯವನ್ನು ತುಂಬ ಕೊಂಡಾಡಿದರು. ಕ್ರಿ. ಶ. ೧ನೇ ಶತಮಾನದ ಶಿಲಾಲೇಖ ಒಂದನ್ನು ಕರ್ನಾಟಕದ ಸಂಶೋಧನ ಸಂಸ್ಥೆಯವರು ವಡಗಾವದಲ್ಲಿ ಹುಡುಕಿದ್ದನ್ನು ಉಲ್ಲೇಖಿಸಿದರು. ಈ ಲೇಖ ಪಟ್ಟೋನ ಬ್ರಾಹ್ಮೀ-ಶಿಲಾಸ್ತಂಭದ ಮೇಲೆ ಪ್ರಾಕೃತ ಲಿಪಿಯಲ್ಲಿದ್ದು ವೇದಕಾಲದ ಯಜ್ಞಯಾಗಾದಿಗಳ ವರ್ಣನೆ ನಾಮನಿರ್ದೇಶ ಇವೇ ಮೊದಲಾದವು ಸಿಕ್ಕವು. ಇತಿಹಾಸ ಕಾಲದ ಪೂರ್ವದಲ್ಲಿ ಹೆಸರಾಗಿದ್ದ ೩೦ ಸ್ಥಳಗಳನ್ನು ಕರ್ನಾಟಕದ ಸಂಶೋಧನ ಶಾಖೆ ಕಂಡುಹಿಡಿದ ಸಂಗತಿಯನ್ನು ಎತ್ತಿ ಹೇಳಿದರಲ್ಲದೆ ೫೦೦ ಕ್ಕಿಂತ ಹೆಚ್ಚು ಶಿಲಾಲೇಖಗಳನ್ನು ಶೋಧಿಸಿ ಅವುಗಳ ಅರ್ಥ ವಿವರಣೆಯಾದ್ದನ್ನೂ ಪ್ರಾಚೀನ ಕಾಲದ ಒಂದು ಸಾವಿರ ಗ್ರಂಥಗಳನ್ನು ಶೇಖರಿಸಿದ್ದನ್ನೂ ಅರುಹಿದರು.

## ಮುಂಗಡ ಪತ್ರಿಕೆ

ತಾ. ೨೬ ಕ್ಕೆ ಮುಂಬಯಿ ಅರ್ಥಸಚಿವರಾದ ಶ್ರೀ ವೈಕುಂಠಲಾಲ ಮೆಹತಾ ೧೯೪೮-೪೯ ರ ಬಗ್ಗೆ ಮುಂಗಡ ಪತ್ರಿಕೆಯನ್ನು ಮಂಡಿಸುತ್ತ ಹೀಗೆ ಹೇಳಿದರು:

ವಿಲಾಸ ವಸ್ತುಗಳ ಮೇಲೆ ಮಾರಾಟದ ಕರ ಹೆಚ್ಚಿಸಲಾಗುವದು. ಮುಂಬಯಿ ಅರಳೆ ಪೇಟೆಯ ವ್ಯವಹಾರಗಳ ಮೇಲೆ 'ಸ್ಟ್ಯಾಂಪ ಡ್ಯೂಟಿ' ಹೆಚ್ಚಿಸಲಾಗುವದು. ಜೂಜಾಟ ಹಾಗೂ ಪೆಟ್ರೋಲ ಮಾರಾಟದ ಕರ ಹೆಚ್ಚಿಸಲಾಗುವದು. ಹೀಗೆ ಕರ ಹೆಚ್ಚಿಸಿದರೆ ೧ ಕೋಟಿ ರೂಪಾಯಿ ಆದಾಯ ಬರುವದೆಂದು ಗಣಿಸಲಾಗಿದೆ. ಬರುವ ವರ್ಷದ ಮುಂಗಡ ಪತ್ರಿಕೆಯಲ್ಲಿ ತೋರಿಸಲಾದ ೨ ಕೋಟಿ ೬೩ ಲಕ್ಷ ೫೮ ಸಾವಿರ ರೂಪಾಯಿಗಳ ಕೊರತೆಯನ್ನು ತಕ್ಕಮಟ್ಟಿಗೆ ತುಂಬಿಕೊಳ್ಳಲು ಈ ಬಗೆಯಾಗಿ ಕರ ಹೆಚ್ಚಿಸಲೇಬೇಕಾಯಿತು. ಯುದ್ಧೋತ್ತರ ಯೋಜನೆಗಳಿಗಾಗಿ ತೆಗೆದಿಟ್ಟ ೧೯ ಕೋಟಿ ರೂಪಾಯಿಗಳ ನಿಧಿಯಿಂದ ಸದ್ಯಕ್ಕೆ ೧ ಕೋಟಿ ೭೦ ಲಕ್ಷ ರೂಪಾಯಿಗಳನ್ನು ಕೊರತೆಯನ್ನು ತುಂಬಿಕೊಳ್ಳಲು ತೆಗೆದುಕೊಳ್ಳಲಾಗುವದು. ಇದರಿಂದ ಮುಂಗಡ ಪತ್ರಿಕೆಯಲ್ಲಿ ತೋರಿಸಿದ ೨೬೩ ಲಕ್ಷ ೫೮ ಸಾವಿರದ ಕೊರತೆ ತುಂಬಿ ೬ ಲಕ್ಷ ೪೨ ಸಾವಿರ ಉಳಿಕೆಯಾಗುತ್ತದೆ. ಬರುವ ವರ್ಷದ ಉತ್ಪನ್ನವು ಈಗಿದ್ದ ಕರಕ್ಕನುಸರಿಸಿ ೪೧ ಕೋಟಿ ೩೮ ಲಕ್ಷವೆಂದೂ ವೆಚ್ಚವು ೪೪ ಕೋಟಿ ೨ ಲಕ್ಷವೆಂದೂ ಗಣಿಸಲಾಗಿದೆ.

ಅರ್ಥಸಚಿವರು ತಮ್ಮ ಭಾಷಣದಲ್ಲಿ ಕೆಳಗಿನ ಅಂಶಗಳನ್ನೂ ತಿಳಿಸಿದರು.

ಸಾಮಾಜಿಕ ಆರ್ಥಿಕ ದೃಷ್ಟಿಯಿಂದ ಸಜಾತೀಯವಾದ ಮೂವತ್ತು ಐವತ್ತು ಹಳ್ಳಿಗಳ ಗುಂಪನ್ನು ರಚಿಸಿ ಪ್ರಾಂತದಲ್ಲಿ ಶೈಕ್ಷಣಿಕ ಸಾಮಾಜಿಕ ಆರ್ಥಿಕ ಅಭಿವೃದ್ಧಿಯಾಗುವಂತೆ ಸರಕಾರವು ಹೆಣಗಬಯಸುತ್ತದೆ. ಮುಂದಿನ ವರ್ಷದಿಂದಲೆ ಈ ಕಾರ್ಯಾರಂಭವಾಗಬೇಕಾಗಿದೆ.

ಪೋಲೀಸ ಖಾತೆಯ ಬಗ್ಗೆ ಹೋದ ವರ್ಷ ೪೯೨ ಲಕ್ಷ ರೂಪಾಯಿ ವೆಚ್ಚವಾಗಿತ್ತು, ಈ ವರ್ಷ ೫೯೩ ಲಕ್ಷ ವೆಚ್ಚ ಕಾಣಿಸಲಾಗಿದೆ.

ಮಹಾತ್ಮರು ಕಳೆದ ಕೆಲ ವರುಷಗಳಿಂದ ಹಳ್ಳಿಗರ ಸುಧಾರಣೆಯನ್ನು-ನೂಲುವದನ್ನು ಮುಂದರಿಸುವದು, ಇತರ ಉದ್ಯೋಗಗಳ ಪುನರುಜ್ಜೀವನ, ಹರಿಜನ ಹಿತ, ಗೋ ರಕ್ಷಣೆ- ಬೇರೆ ಬೇರೆ ಭಾವಿಸದೇ ಒಂದೆಂದು ಭಾವಿಸಿದರೆ ಮಾತ್ರ ಹಳ್ಳಿಗಳ ಉದ್ಧಾರವಾಗುವದೆಂದು ಬಗೆದಿದ್ದರು. ಹಳ್ಳಿಗರ ಸೇವೆಯನ್ನು ಎಲ್ಲ ಬಗೆಯಿಂದಲೂ ಸಾಧಬೇಕೆಂದು ಅವರು ತಿಳಿಸಿದ್ದರು. ಅವರ ಸಾಮಾಜಿಕ ತತ್ವವು ಸರ್ವರ ಹಿತ ಬಯಸುವದೇ ಆಗಿತ್ತು. ಅದನ್ನೇ ಸರ್ವೋದಯವೆಂದು ಅವರು ಹೇಳುತ್ತಾರೆ.

ವಂಶಾಧಿಕಾರ ಮುಕ್ತಾಯವಾದೊಡನೆ ಸಂಸ್ಥಾನಕ್ಕೆ ಹೊಂದಿ ಇರುವ ಗಡಿ ಪ್ರದೇಶದಲ್ಲಿ ಪರಿಸ್ಥಿತಿ ಗಂಭೀರವಾಯಿತು. ವಿಶೇಷತಃ ಹೈದರಾಬಾದ ಸಂಸ್ಥಾನದ ಗಡಿಗೆ ಹೊಂದಿ ಇರುವ ಜಿಲ್ಹೆಗಳಲ್ಲಿ ಗಂಭೀರ ಪರಿಸ್ಥಿತಿಯುಂಟಾಯಿತು. ಈ ವಿದೇಶಿ ಪ್ರಭುತ್ವ ಹೋದೊಡನೆಯೇ ದುಷ್ಟಪ್ರವೃತ್ತಿಯ ಜನರು ತಲೆ ಎತ್ತಿ ಅಶಾಂತ ಪರಿಸ್ಥಿತಿಯನ್ನುಂಟುಮಾಡಹತ್ತಿದ್ದನ್ನು ಹತ್ತಿಕ್ಕಲು ಪೋಲೀಸ ಪಡೆ ಹೆಚ್ಚಿಸುವದು ಅನಿವಾರ್ಯವಾಗಿದೆ.

## ಮುಂಬಯಿ ಸರಕಾರದ ಮುಂಗಡ ಪತ್ರಿಕೆಯ ಸಾರ

| | |
|---|---|
| ಒಟ್ಟು ಆದಾಯ | ೪೧೩೮.೪೨ ಲಕ್ಷ |
| ವೆಚ್ಚ | ೪೪೦೨.೦ ಲಕ್ಷ |
| ಕೊರತೆ | ೨೬೩ ೫೮ ಲಕ್ಷ |

ಅಬಕಾರಿ ಉತ್ಪನ್ನದಲ್ಲಿ ೧೬೦ ಲಕ್ಷ ಆದಾಯವು ಕಡಮೆಯಾಗುವದೆಂದು ಕಾಣಿಸಲಾಗಿದೆ.

## ಕರಭಾರ ಹೆಚ್ಚಿಸಿ ಬರುವ ಆದಾಯ

| | |
|---|---|
| ವಿಲಾಸ ವಸ್ತುಗಳ ಮಾರಾಟಕರ | ೪೦ ಲಕ್ಷ.ರೂ |
| ಅರಳೆ ವ್ಯಾಪಾರದ ಸ್ಟ್ಯಾಂಪಡ್ಯೂಟಿ | ೫ ಲಕ್ಷ.ರೂ |
| ಮನರಂಜನೆಯ ಕರ | ೩೦ ಲಕ್ಷ.ರೂ |
| ಜೂಜಾಟದ ಕರ | ೧೫ ಲಕ್ಷ.ರೂ |
| ಪೆಟ್ರೋಲ ಮಾರಾಟ ಕರ | ೨೦ ಲಕ್ಷ ರೂ |
| ಅಂತೂ | ೧೦೦ ಲಕ್ಷ.ರೂ |

## ವೆಚ್ಚದ ವೈಶಿಷ್ಟ್ಯಗಳು

ಗ್ರಾಮೋದ್ಧಾರದ ಬಗ್ಗೆ ೧೦೦ ಲಕ್ಷ.ರೂ ಕೇಂದ್ರ ಸಂಬಳ ಸಮಿತಿಯ ಶಿಫಾರಸು ಬಳಿಕೆಯಲ್ಲಿ ತಂದರೆ ಬರುವ ಹೆಚ್ಚಿನ ವೆಚ್ಚಕ್ಕೆ ೧೫೦ ಲಕ್ಷ.ರೂ ಮುಂಬಯಿ ನಗರ ಸಭೆಗೆ ಸಾಲ ೫೦ ಲಕ್ಷ ರೂ.

---

# ಮದ್ರಾಸ ಶಾಸನ ಸಭೆ

## ಮುಂಗಡ ಪತ್ರ

ಮದ್ರಾಸದ ಅರ್ಥಸಚಿವರಾದ ಶ್ರೀ. ಬಿ. ಗೋಪಾಲರೆಡ್ಡಿಯವರು ತಾ. ೨೫ ಕ್ಕೆ ಶಾಸನ ಸಭೆಯಲ್ಲಿ ೧೯೪೮—೪೯ ರ ಮುಂಗಡ ಪತ್ರಿಕೆ ಮಂಡಿಸಿದರು. ಈ ಸಲದ ಮುಂಗಡ ಪತ್ರಿಕೆಯಲ್ಲಿ ಸರಕಾರದ ಆದಾಯ ೫೫ ಕೋಟಿ ೯೪ ಲಕ್ಷ ರೂಪಾಯಿಗಳೆಂದೂ ಅಂದಾಜ ವೆಚ್ಚವು ೫೫ ಕೋಟಿ ೯೩ ಲಕ್ಷ ರೂಪಾಯಿಗಳೆಂದೂ ತೋರಿಸಿ ೬೮ ಸಾವಿರ ೬ ನೂರು ರೂಪಾಯಿ ಉಳಿಕೆ ಎಂದು ಕಾಣಿಸಲಾಗಿದೆ.

ಈ ಬಗ್ಗೆ ಅರ್ಥಸಚಿವರು ಭಾಷಣ ಮಾಡುತ್ತ ಹೊಸ ಕರಭಾರ ಹೇರಿಲ್ಲವೆಂದೂ ಇದ್ದ ಕರಗಳನು ಕಡಿಮೆ ಮಾಡಲು ಮಾತ್ರ ಸಾಧ್ಯವಾಗಲಿಲ್ಲವೆಂದೂ ಮದ್ಯಪಾನ ನಿರೋಧದಿಂದ ಸರಕಾರದ ಆದಾಯ ಕಡಿಮೆಯಾಗಿದ್ದರೂ ಉಳಿತಾಯದ ಮುಂಗಡ ಪತ್ರವನ್ನೇ ಮಂಡಿಸಲಾಗಿದೆಯೆಂದೂ ಹೇಳಿದರು.

ಪೋಲೀಸ, ಶಿಕ್ಷಣ, ವಿದ್ಯಾಖಾತೆಗಳಲ್ಲಿ ವೆಚ್ಚ ಹೆಚ್ಚಿದೆ. ಹೋದ ವರ್ಷ ಪೋಲೀಸ ಖಾತೆಗೆ ೪ ಕೋಟಿ ೪೦ ಲಕ್ಷ ರೂ. ವೆಚ್ಚ ತಗಲಿತ್ತು. ಬರುವ ವರ್ಷ ೬ ಕೋಟಿ ರೂ ಬೇಕಾಗಿವೆ. ಯುದ್ಧ ಪೂರ್ವದಲ್ಲಿ ಶಿಕ್ಷಣ ಖಾತೆಗೆ ೧೬೦ ಲಕ್ಷ ರೂ. ವೆಚ್ಚ ಮಾಡಲಾಗುತ್ತಿತ್ತು. ಈ ವರ್ಷ ೮೨೦ ಲಕ್ಷ ರೂ. ಗಳ ವೆಚ್ಚ ಬೇಕೆಂದು ಕಾಣಿಸಲಾಗಿದೆ. ತುಂಗಭದ್ರಾ ನೀರಾವರಿ ಯೋಜನೆಯೊಂದಕ್ಕೇ ೨೯೦ ಲಕ್ಷ ರೂ ವೆಚ್ಚ ಮಾಡುವದೆಂದು ಗೊತ್ತಾಗಿದೆ.

ಹೀಗೆ ವೆಚ್ಚ ಹೆಚ್ಚಿದ್ದರೂ ಪಾನನಿರೋಧದಿಂದ ೪ ಕೋಟಿ ರೂ. ಆದಾಯ ಕಡಮೆಯಾಗುವದು.

ಕ್ಷಾಮ ಪರಿಹಾರಕ್ಕೆ ನಿಶ್ಚಿತ ಧನ ತೆಗೆದಿಟ್ಟಿದ್ದರೂ ಹೆಚ್ಚು ಆಹಾರ ಬೆಳೆವ ರೈತರಿಗೆ ಸಹಾಯ ಧನ ಕೊಡುವದಾಗಿ ನಿರ್ಧರಿಸಿದ್ದು ಇದೂ ಹೆಚ್ಚಿನ ವೆಚ್ಚವೇ.

ಇದನ್ನು ಹೊಂದುಗೂಡಿಸಲು ವ್ಯಾಪಾರಿ ಕರದಿಂದ ೩೬೫ ಲಕ್ಷ ರೂ. ಮನರಂಜನೆಯ ಕರದಿಂದ ೨೨ ಲಕ್ಷ ಹೀಗೆ ಆದಾಯ ಬರಮಾಡಿಕೊಂಡದ್ದರಿಂದಲೂ ಸೀದಾ ವಿನಿಯಂತ್ರಣವಾದ್ದರಿಂದ ೬೭ ಲಕ್ಷ ರೂ. ಗಳ ಉಳಿತಾಯವಾದ್ದರಿಂದಲೂ ಹಾಗೂ ಹೀಗೂ ಮುಂಗಡ ಪತ್ರಿಕೆ ಬಾಯಿಗೂಡಿದೆ.

---

ನಗರಗಳಲ್ಲಿಯ ಸೀದಾ ಪದ್ಧತಿಯನ್ನು ರದ್ದುಪಡಿಸಲಾಗುವದೆಂದು ಕೆಲ ಪತ್ರಿಕೆಗಳಲ್ಲಿ ಪ್ರಸಿದ್ಧವಾದ ಸುದ್ದಿ ನಿರಾಧಾರವಾಗಿದೆಯೆಂದು ಮುಂಬಯಿ ಸರಕಾರದವರು ಪ್ರಸಿದ್ಧಿಸುತ್ತಾರೆ.

# ಹಿಂದುಸ್ತಾನದ ಹೊಸ ಘಟನೆ

## ಉಪಸಮಿತಿಯ ಕರಡು ಒಪ್ಪಿಸಲ್ಪಟ್ಟಿತು

### ಭಾಷಾನ್ವಯ ಪ್ರಾಂತಗಳ ಬಗ್ಗೆ ಸಮಿತಿ ನೇಮಿಸುವ ಸೂಚನೆ

ಸ್ವತಂತ್ರ ಹಿಂದುಸ್ತಾನದ ಘಟನೆಯ ಕರಡು ಸಿದ್ಧಪಡಿಸಲು ಘಟನಾ ಸಮಿತಿಯು ನೇಮಿಸಿದ ಉಪ ಸಮಿತಿಯು ಸಿದ್ಧಪಡಿಸಿದ ಹಿಂದುಸ್ತಾನದ ಕಚ್ಚಾ ಘಟನೆಯು ಘಟನಾ ಸಮಿತಿಯ ಅಧ್ಯಕ್ಷರಿಗೆ ಒಪ್ಪಿಸಲ್ಪಟ್ಟು ೨೬ನೇ ತಾರೀಕಿಗೆ ಪ್ರಸಿದ್ಧಿಸಲ್ಪಟ್ಟಿದೆ. ಅದರಲ್ಲಿ ೧೮ ವಿಭಾಗಗಳನ್ನು ಮಾಡಿದ್ದು ೩೧೫ ಕಲಮುಗಳು ಮತ್ತು ೮ ಪರಿಶಿಷ್ಟಗಳು ಇವೆ.

ಡಾ. ಬಿ. ಆರ್. ಅಂಬೇಡಕರರು ಈ ಉಪ ಸಮಿತಿಯ ಅಧ್ಯಕ್ಷರಾಗಿದ್ದರು. ಎನ್. ಗೋಪಾಲಸ್ವಾಮಿ ಅಯ್ಯಂಗಾರ, ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ, ಕೆ. ಎಂ. ಮುನಶಿ, ಎನ್. ಮಾಧವ ರಾವ, ಡಿ. ಪಿ. ಖೈತಾನ ಮತ್ತು ಮಹ್ಮದ ಸಾದುಲ್ಲಾ ಇವರು ಸದಸ್ಯರಾಗಿದ್ದರು. ಘಟನಾ ಸಮಿತಿ ಕಳೆದ ಜನವರಿಯಲ್ಲಿ ಸ್ವೀಕರಿಸಿದ ಧ್ಯೇಯನಿರೂಪಕ ಗೊತ್ತುವಳಿಯನ್ನು ಈ ಕರಡು ಅನುಸರಿಸಿದೆ. ಹಿಂದುಸ್ತಾನವನ್ನು ಸಾರ್ವಭೌಮ ಲೋಕಸತ್ತಾತ್ಮಕ ಪ್ರಜಾರಾಜ್ಯವನ್ನಾಗಿ ಘಟಿಸಲು ಹಾಗು ಅದರ ಎಲ್ಲ ನಾಗರಿಕರಿಗೆ ಸಾಮಾಜಿಕ ಆರ್ಥಿಕ ಮತ್ತು ರಾಜಕೀಯ ನ್ಯಾಯವನ್ನು ವಿಚಾರ ಅಭಿಪ್ರಾಯ ಶ್ರದ್ಧೆ ಮತ ಹಾಗು ಪ್ರಕಾಶ ಸ್ವಾತಂತ್ರ್ಯವನ್ನು ಸಮಾನ ಸ್ಥಾನಮಾನ ಹಾಗು ಸಂಧಿಯನ್ನು ದೊರಕಿಸಿ ಕೊಡಲು ಮತ್ತು ವೈಯಕ್ತಿಕ ಗೌರವದ ಹಾಗು ರಾಷ್ಟ್ರದ ಐಕ್ಯದ ಆಶ್ವಾಸನಕೊಟ್ಟು ಅವರಲ್ಲಿ ಸರ್ವವಿಧ ಬಾಂಧವ್ಯ ಬೆಳೆಸುವ ಅವಕಾಶವನ್ನು ಇದರಲ್ಲಿ ಕಲ್ಪಿಸಿಕೊಡಲಾಗಿದೆ.

ಭಾಷಾನ್ವಯ ಪ್ರಾಂತರಚನೆಯ ಸಂಬಂಧದಲ್ಲಿ ಹೇಳುತ್ತ, ಪರಿಶಿಷ್ಟದಲ್ಲಿ ಮಾತ್ರ ಪ್ರತ್ಯೇಕ ಪ್ರಾಂತದ ಉಲ್ಲೇಖ ಮಾಡಿದರೆ ಹೊಸ ಘಟನೆಯ ಪ್ರಾರಂಭದಿಂದ ಅದು ಅಸ್ತಿತ್ವದಲ್ಲಿ ಬರುವದೆಂದು ಹೇಳಲು ಬರುವದಿಲ್ಲೆಂದು ಸಮಿತಿಯ ಅಭಿಪ್ರಾಯವಾಗಿದ್ದು, ಹೊಸ ಘಟನೆಯ ಪ್ರಾರಂಭದಿಂದ ಹೊಸ ರಾಷ್ಟ್ರವು ಅಸ್ತಿತ್ವದಲ್ಲಿ ಬರಬೇಕಾದರೆ ಸದ್ಯದ ಘಟನೆಯ ಮೇರೆಗೆ ಕೂಡಲೆ ಪ್ರಾಸ್ತಾವಿಕ ಉಪಾಯಗಳನ್ನು ಕೈಕೊಳ್ಳಬೇಕಾಗುವದೆಂದು ಅದು ಅಭಿಪ್ರಾಯಪಟ್ಟಿದೆ. ಆಂಧ್ರ ಪ್ರಾಂತದ ಸಂಬಂಧದಲ್ಲಿಯಷ್ಟೇ ಅಲ್ಲದೆ ಉಳಿದ ಭಾಷಾನುಗುಣ ಪ್ರದೇಶಗಳ ಸಂಬಂಧದಲ್ಲಿಯೂ ಯಾವತ್ತೂ ವಿಷಯಗಳ ವಿಚಾರ ಮಾಡಲು ಒಂದು ಸಮಿತಿಯನ್ನು ನೇಮಿಸತಕ್ಕದ್ದೆಂದು ಈ ಸಮಿತಿಯು ಸೂಚಿಸುತ್ತದೆ. ಮತ್ತು ರ್ಘಟನೆಯ ಇಸ್ವಿಯ ಕಾಯದೆಯ ಮೇರೆಗೆ ಯಾವದಾದರೂ ಹೊಸ ರಾಷ್ಟ್ರವನ್ನು ರಚಿಸಿ ಹಾಗು ಘಟನೆಯು ಕೊನೆಯದಾಗಿ ಸ್ವೀಕರಿಸಲ್ಪಡುವ ಮೊದಲು ಕರಡಿನ ಪರಿಶಿಷ್ಟದಲ್ಲಿ ಅದನ್ನು ಕಾಣಿಸಲು ಸಮಿತಿಯು ಸೂಚಿಸಬಯಸುತ್ತಿದ್ದರೆ ಹಾಗೆ ಮಾಡಲು ಅನುಕೂಲವಾಗುವಂತೆ ಸಕಾಲದಲ್ಲಿ ವರದಿಮಾಡಲು ಅದಕ್ಕೆ ಸಲಹೆ ಕೊಡಬೇಕೆಂದೂ ತಿಳಿಸಿದೆ.

### ಒಕ್ಕೂಟದ ಅಧ್ಯಕ್ಷರು

ಹಿಂದುಸ್ತಾನ ರಾಷ್ಟ್ರಗಳ ಒಕ್ಕೂಟ ಎಂದು ಕರೆಯಲಾಗಿದೆ. ಈ ಒಕ್ಕೂಟದ ಮುಖ್ಯನೇ ಹಿಂದುಸ್ತಾನದ ಅಧ್ಯಕ್ಷನು. ಎಲ್ಲ ಅಧಿಕಾರ ಇವನಲ್ಲಿ ಸೇರ್ಪಡೆಯಾಗುವದು. ಹೊಣೆಗಾರ ಮಂತ್ರಿಗಳ ಸಲಹೆ ಪ್ರಕಾರ ಅವನು ಅದನ್ನು ನಿರ್ವಹಿಸುವನು. ಅವನು ಪಾರ್ಲಿಮೆಂಟಿನ ಎರಡೂ ಗೃಹಗಳ ಸದಸ್ಯರ ಮತ್ತು ರಾಷ್ಟ್ರಗಳ ಶಾಸನ ಸಭೆಗಳ ಲೋಕನಿಯುಕ್ತರಿಂದ ಕೂಡಿದ ಚುನಾವಣೆ ಮಂಡಳದಿಂದ ಆರಿಸಲ್ಪಡುವನು. ಅವನ ಅಧಿಕಾರದ ಅವಧಿ ೫ ವರ್ಷ. ಅವನು ಮತ್ತೊಮ್ಮೆ ಮಾತ್ರ ಚುನಾವಣೆಗೆ ನಿಲ್ಲಬಲ್ಲನು. ಅವನ ವಯಸ್ಸು ೩೫ ವರ್ಷಕ್ಕಿಂತ ಕಡಿಮೆ ಇರತಕ್ಕದ್ದಲ್ಲ. ಮತ್ತು ಅವನು ಪಾರ್ಲಿಮೆಂಟಿನ ಕೆಳಗಿನ ಮನೆಗೆ ಆರಿಸಲ್ಪಡುವ ಅರ್ಹತೆಯುಳ್ಳವನಿರಬೇಕು. ಅವನು ಘಟನೆಯನ್ನು ಮೀರಿ ನಡೆದರೆ ಅವನನ್ನು ವಿಚಾರಣೆಗೆ ಗುರಿ ಮಾಡಬಹುದು. ಉಪಾಧ್ಯಕ್ಷನು ಕೌನ್ಸಿಲ್ ಆಫ್ ಸ್ಟೇಟಿನ ಎಕ್ಸ ಅಫಿಸಿಯೋ ಚೆಅರಮನ್ ನಾಗುವನು. ಮತ್ತು ಪಾರ್ಲಿಮೆಂಟಿನ ಎರಡೂ ಗೃಹಗಳ ಸಂಯುಕ್ತ ಸಭೆಯಲ್ಲಿ ಸಂಖ್ಯಾನುಗುಣ ಪ್ರಾತಿನಿಧ್ಯ ಪದ್ಧತಿಯಿಂದ ತಲೆಗೊಂದರಂತೆ ಮತ್ತು ಬದಲಿ ಸಬರುವಂತಿರುವ ಮತದಾನದಿಂದ ಅವನು ಆರಿಸಲ್ಪಡುವನು. ಅವನ ಅಧಿಕಾರದ ಅವಧಿ ೫ ವರ್ಷ.

### ಮಂತ್ರಿ ಮಂಡಳ

ಮಂತ್ರಿ ಮಂಡಳಕ್ಕೆ ಮುಖ್ಯ ಮಂತ್ರಿ ಪರಿಷ್ಕರು. ಅಧ್ಯಕ್ಷನಿಗೆ ಸಹಾಯ ಸಲಹೆ ಕೊಡುವದು ಮಂಡಳದ ಕರ್ತವ್ಯ. ಪ್ರಜಾ ಸಭೆಗೆ ಅದು ಸಾಮೂಹಿಕವಾಗಿ ಹೊಣೆಗಾರವಿರುವದು.

ಒಕ್ಕೂಟ ಪಾರ್ಲಮೆಂಟವು ಅಧ್ಯಕ್ಷ ಹಾಗು ಎರಡು ಗೃಹಗಳೆಂದರೆ ಕೌನ್ಸಿಲ್ ಆಫ ಸ್ಟೇಟ್ಸ ಹಾಗು ಪ್ರಜಾ ಸಭೆಗಳಿಂದ ಯುಕ್ತವಾಗಿರತಕ್ಕದ್ದು. ಕೌನ್ಸಿಲ್ ಆಫ ಸ್ಟೇಟ್ಸದಲ್ಲಿ ೨೫೦ ಸದಸ್ಯರಿರತಕ್ಕದ್ದು. ಅವರಲ್ಲಿ ೧೫ ಜನರನ್ನು ಅಧ್ಯಕ್ಷರು ಸಾಹಿತ್ಯ ಕಲೆ ವಿಜ್ಞಾನ ಮೊದಲಾದವುಗಳ ಪ್ರತಿನಿಧಿಗಳೆಂದು ನೇಮಕ ಮಾಡತಕ್ಕದ್ದು. ಉಳಿದವರನ್ನು ರಾಷ್ಟ್ರಗಳು ಆರಿಸುವವು. ಪ್ರಜಾ ಸಭೆಯು ೫೦೦ ಕ್ಕಿಂತ ಹೆಚ್ಚು ಪ್ರತಿನಿಧಿಗಳಿಂದ ಕೂಡಿರತಕ್ಕದ್ದಲ್ಲ. ಪ್ರೌಢ ಮತದಾನದಿಂದ ಅವರು ಆರಿಸಿ ಬಂದಿರತಕ್ಕದ್ದು. ಪ್ರತಿ ೭॥ ಲಕ್ಷ ಜನ ಸಂಖ್ಯೆಗೆ ಒಬ್ಬನಿಗಿಂತ ಕಡಮೆ ಹಾಗು ಪ್ರತಿ ೫ ಲಕ್ಷ ಜನ ಸಂಖ್ಯೆಗೆ ಒಬ್ಬನಿಗಿಂತ ಹೆಚ್ಚು ಪ್ರತಿನಿಧಿಯಿರತಕ್ಕದ್ದಲ್ಲ. ಕೌನ್ಸಿಲ್ ಆಫ್ ಸ್ಟೇಟ್ಸ ವಿಸರ್ಜಿಸಲ್ಪಡುವದಿಲ್ಲ. ಪ್ರತಿ ಎರಡು ವರ್ಷಕ್ಕೆ ಸದಸ್ಯರಲ್ಲಿ ಸುಮಾರು ೧/೩ ದಷ್ಟು ಜನರು ನಿವೃತ್ತರಾಗುವರು. ಪ್ರಜಾ ಸಭೆಯ ಅವಧಿ ೫ ವರ್ಷದ್ದಿದ್ದು ಅದರ ನಂತರ ಅದು ವಿಸರ್ಜಿಸಲಾಗುವದು. ಆದರೆ ಯಾವದೇ ಕಠಿಣ ಪ್ರಸಂಗದಲ್ಲಿ ಅದರ ಅವಧಿಯನ್ನು ಒಂದು ವರ್ಷಕ್ಕಿಂತ ಹೆಚ್ಚಿಲ್ಲದಷ್ಟು ಬೆಳೆಸಲು ವ್ಯವಸ್ಥೆ ಮಾಡಲಾಗಿದೆ.

ಒಕ್ಕೂಟ ಪಾರ್ಲಮೆಂಟಿನ ಕಾರ್ಯಕಲಾಪಗಳು ಹಿಂದೀ ಅಥವಾ ಇಂಗ್ಲೀಷಿನಲ್ಲಿ ನಡೆಯಬೇಕು. ಇವೆರಡೂ ಭಾಷೆ ಬಾರದಿದ್ದವರು ತಮ್ಮ ಮಾತೃಭಾಷೆಯಲ್ಲಿ ಅಭಿಪ್ರಾಯ ವ್ಯಕ್ತ ಮಾಡಬಹುದು.

### ವರಿಷ್ಠ ನ್ಯಾಯಾಸನ

ಹಿಂದುಸ್ತಾನದಲ್ಲಿ ವರಿಷ್ಠ ನ್ಯಾಯಾಸನವೊಂದನ್ನು ಸ್ಥಾಪಿಸಲಾಗುವದು. ಅದರಲ್ಲಿ ಒಬ್ಬ ವರಿಷ್ಠ ನ್ಯಾಯಾಧೀಶ ಮತ್ತು ಏಳಕ್ಕಿಂತ ಕಡಿಮೆಯಿಲ್ಲದಷ್ಟು ನ್ಯಾಯಾಧೀಶರಿರತಕ್ಕದ್ದು. ಹೊಸ ಖಟ್ಲೆಗಳ ವಿಚಾರಣೆ, ಅಪೀಲಗಳ ವಿಚಾರಣೆ, ಒಕ್ಕೂಟ ಮತ್ತು ಘಟಕ ಇಲ್ಲವೆ ಘಟಕಗಳ ನಡುವಿನ ಖಟ್ಲೆಗಳ ವಿಚಾರಣೆ ಮೊದಲಾದವುಗಳನ್ನು ಈ ವರಿಷ್ಠ ನ್ಯಾಯಾಸನವು ಮಾಡಬಲ್ಲದು. ೧೯೩೫ ನೇ ಇಸ್ವಿಯ ಕಾನೂನಿನಲ್ಲಿಯಂತೆ ಆಡಿಟರ ಜನರಲ್ಲರ ನೇಮಕದ ವ್ಯವಸ್ಥೆಯೂ ಆಗಿದೆ.

### ಪ್ರಾಂತಗಳ ಆಡಳಿತ

ಪ್ರತಿಯೊಂದು ಪ್ರಾಂತದಲ್ಲಿ ಒಬ್ಬ ಗವರ್ನರ ಇರತಕ್ಕದ್ದು ಕಾರ್ಯಕಾರೀ ಅಧಿಕಾರ ಅವನದು. ಗವರ್ನರರು ೧) ಆಯಾ ಪ್ರಾಂತದಲ್ಲಿಯ ಸಾಮಾನ್ಯ ಮತದಾರ ಅಧಿಕಾರವಿದ್ದವರಿಂದ ನೇರವಾಗಿ ಆರಿಸಲ್ಪಡಬೇಕು ಇಲ್ಲವೆ ೨) ಕಾಯದೆ ಮಂಡಳದಿಂದ ಆರಿಸಲ್ಪಟ್ಟ ನಾಲ್ವರಲ್ಲಿ ಅಧ್ಯಕ್ಷರು ಒಬ್ಬರನ್ನು ಆರಿಸಬೇಕೆಂದು ಸಮಿತಿಯವರು ಸೂಚಿಸಿದ್ದಾರೆ. ಇವರ ಅಧಿಕಾರಾವಧಿ ೫ ವರ್ಷ. ಕೆಲ ವಿಷಯಗಳನ್ನು ಬಿಟ್ಟು ಉಳಿದ ವಿಷಯಗಳಲ್ಲೆಲ್ಲ ಗವರ್ನರನು ಮಂತ್ರಿಮಂಡಳದ ಸಲಹೆಯಂತೆಯೆ ವರ್ತಿಸುವನು. ೨ ವಾರಕ್ಕಿಂತ ಹೆಚ್ಚು ಅವಧಿಯ ವರೆಗೆ ಘಟನೆಯ ಸ್ವಯಂ ಆಡಳಿತವನ್ನು ಗವರ್ನರನು ತಡೆಹಿಡಿಯಲಾರನು. ಪ್ರಾಂತಗಳಿಗೆ ಮಂತ್ರಿಮಂಡಳವೊಂದಿದ್ದು ಮುಖ್ಯಮಂತ್ರಿ ಅದಕ್ಕೆ ಮುಖ್ಯಸ್ಥ. ಗವರ್ನರ ಮತ್ತು ಕಾಯದೆಮಂಡಳಗಳು ಕಾಯದೆ ವಿಧಾಯಕ ಕಾರ್ಯ ನಡೆಸುವವು. ಕೆಲ ಪ್ರಾಂತಗಳಲ್ಲಿ ಒಂದು ಕೆಲವುಗಳಲ್ಲಿ ಎರಡು ಕಾಯದೆ ಮಂಡಳಗಳಿವೆ. ಪ್ರೌಢಮತದಾನ ಪದ್ಧತಿಯನ್ವಯ ಕಾಯದೆ ಮಂಡಳಗಳಿಗೆ ಸದಸ್ಯರ ಆಯ್ಕೆಯಾಗತಕ್ಕದ್ದು. ಅದರಲ್ಲಿ ೬೦ ಕ್ಕಿಂತ ಕಡಮೆ ಮತ್ತು ೩೦೦ ಕ್ಕಿಂತ ಹೆಚ್ಚು ಸದಸ್ಯರಿರಕೂಡದು ವಿಧಿಮಂಡಳದ ಸದಸ್ಯರಲ್ಲಿ ಅರ್ಧದಷ್ಟು ವ್ಯವಸಾಯದ ತಳಹದಿಯ ಮೇಲೆ, ೧/೩ ಜನರು ಶಾಸನ ಸಭೆಯ ಸದಸ್ಯರಿಂದ ಆರಿಸಲ್ಪಟ್ಟು ಉಳಿದವರನ್ನು ಗವರ್ನರರು ನೇಮಿಸಬೇಕು. ಶಾಸನ ಸಭೆಯ ಜೀವನಾವಧಿ ೫ ವರ್ಷ. ವಿಧಿಮಂಡಳದ ೧/೩ ದಷ್ಟು ಸದಸ್ಯರು ಪ್ರತಿವರ್ಷ ನಿವೃತ್ತರಾಗತಕ್ಕದ್ದು. ಎಲ್ಲ ಒಕ್ಕೂಟದ ಕೇಂದ್ರೀಕರಿಸಿದ ಪ್ರಾಂತಗಳ ಆಡಳಿತಾಧಿಕಾರ ಅಧ್ಯಕ್ಷರಿಗೆ ಒಪ್ಪಿಸಲಾಗಿದೆ.

### ಅಲ್ಪಸಂಖ್ಯಾಕರ ರಕ್ಷಣೆ

ಮುಸಲ್ಮಾನ, ದಲಿತವರ್ಗ ಗುಡ್ಡಗಾಡ ಜನರು, ಹಿಂದೀ ಕ್ರಿಶ್ಚನರು (ಮುಂಬಯಿ ಮದ್ರಾಸ ಪ್ರಾಂತಗಳಲ್ಲಷ್ಟೇ) ಇವರಿಗಾಗಿ ಕಾಯದೆಮಂಡಳಗಳಲ್ಲಿ ಮುಂದಿನ ಹತ್ತು ವರ್ಷಗಳ ವರೆಗೆ ಸ್ಥಳಗಳನ್ನು ಕಾಯ್ದಿಡಲಾಗಿದೆ. ನೌಕರಿ ಮತ್ತು ಶೈಕ್ಷಣಿಕ ಧನಸಹಾಯ ಈ ವಿಷಯಗಳಲ್ಲಿ ಅಂಗ್ಲೋ ಇಂಡಿಯನ್‌ರಿಗೆ ಸವಲತ್ತುಗಳನ್ನು ಕೊಡಲಾಗಿದೆ. ಒಕ್ಕೂಟ ಮತ್ತು ಪ್ರಾಂತಗಳಲ್ಲಿ ಅಲ್ಪಸಂಖ್ಯಾಕರ ಹಿತರಕ್ಷಣೆಯ ಬಗ್ಗೆ ಒಬ್ಬ ವಿಶೇಷ ಅಧಿಕಾರಿಯನ್ನು ನೇಮಿಸುವ ವ್ಯವಸ್ಥೆಯಿದೆ. ಅಲ್ಲದೆ ಹಿಂದುಳಿದ ವರ್ಗಗಳ ಹಾಗು ಪ್ರತ್ಯೇಕಿಸಲ್ಪಟ್ಟ ವರ್ಗಗಳ ಜನರ ಪರಿಸ್ಥಿತಿಯನ್ನು ಪರಿಶೀಲಿಸಲು ಮಂಡಳವನ್ನು ನೇಮಿಸುವ ವ್ಯವಸ್ಥೆಯನ್ನೂ ಮಾಡಲಾಗಿದೆ.

---

## ಹೈದರಾಬಾದದಲ್ಲಿ ಇತ್ತಿಹಾದುಲ್ ಮುಸಲ್ಮೀನ ರಾಜ್ಯ

### ಇಸ್ಲಾಂ ರಾಷ್ಟ್ರ ಸ್ಥಾಪನೆಗೆ ಅಡ್ಡ ಬಂದವರನ್ನೆಲ್ಲ ಕೊಲ್ಲುವ 'ಜೆಹಾದ'

ನಿಜಾಮ ಸರಕಾರದ ಮಂತ್ರಿ ಮಂಡಲದಿಂದ ರಾಜೀನಾಮೆ ಕೊಟ್ಟು ಹೊರ ಬಂದ ಶ್ರೀ. ಜಿ. ರಾಮಾಚಾರಿಯವರು ಒಂದು ಪ್ರಕಟನೆಯಲ್ಲಿ ಹೀಗೆ ವಿವರಿಸಿದ್ದಾರೆ.

ನಿಜಾಮ ಸರಕಾರ ಮತ್ತು ಜನತಾ ಪ್ರತಿನಿಧಿಯಾದ ಸಂಸ್ಥಾನ ಕಾಂಗ್ರೆಸಗಳ ನಡುವೆ ಒಪ್ಪಂದಕ್ಕೆ ಅನುಕೂಲತೆ ಉಂಟಾಗಲೆಂದೇ ನಾನು ನಡುಗಾಲ ಸರಕಾರದ ಮಂತ್ರಿಮಂಡಲದಲ್ಲಿ ಸೇರಿದೆ. ಅದರಂತೆ ಒಪ್ಪಂದದ ಮಾತುಗಳನ್ನು ಎತ್ತಿದೆನಲ್ಲದೆ ಈ ಬಗ್ಗೆ ಒತ್ತಾಯವನ್ನೇ ಮಾಡಿದೆ. ಆದರೆ ಸರಕಾರವು ತೀರ ಅಲಿಪ್ತ ಮತ್ತು ಉದಾಸೀನ ಭಾವವನ್ನು ತೋರಿಸಿತು. ನನಗೆ ಕಳವಳಿತು. ಇದರಿಂದ ನನಗೆ ತುಂಬ ನಿರಾಶೆಯಾಯಿತು.

### ಪುಂಡಾಟಿಕೆ

ಬರಬರುತ್ತ ಸಂಸ್ಥಾನದಲ್ಲೆಲ್ಲ ಇತ್ತಿಹಾದುಲ್ ಮುಸಲ್ಮೀನ ಮಜಲಿಸದವರ ನಿರಂಕುಶವಾದ ನೀತಿಗೆಟ್ಟ ಪುಂಡಾಟಿಕೆ ತಲೆದೋರಿತು. ಮುಸಲ್ಮಾನರಲ್ಲದವರ ವಿತ್ತ ಜೀವನ ಮಾನಗಳು ಸುರಕ್ಷಿತವಾಗಿರುವದು ದುಸ್ತರವಾಯಿತು. ಹಿಂಸಾಚಾರಕ್ಕೆ ಮೇರೆ ಇಲ್ಲದಾಯಿತು. ಕೊಲೆ, ಸುಲಿಗೆ, ಕೊಳ್ಳೆ, ಸ್ತ್ರೀ ಮಾನಭಂಗ ಇವೆಲ್ಲ ದಿನದ ಮಾತಾಗಿ ಬಿಟ್ಟವು. ಪುಂಡರನ್ನು ನಿಗ್ರಹಿಸುವ ಬದಲು ಈ ಕೃತಿಗಳಿಗೆ ಒಂದು ಬಗೆಯ ಪ್ರೋತ್ಸಾಹನೆ ಪುಂಡರಿಗೆ ಸಿಗತೊಡಗಿತು. ಇತ್ತೀಹಾದುಲ್ ಪಕ್ಷದವರು ಬಹಿರಂಗವಾಗಿಯೇ ಬೆಂಕಿ ಖಡ್ಗಗಳನ್ನು ಬೇಕಾದ ಹಾಗೇ ಉಪಯೋಗಿಸಿರೆಂದು ಪ್ರಚಾರ ಮಾಡತೊಡಗಿದರು ಇಸ್ಲಾಂ ರಾಷ್ಟ್ರ ಸ್ಥಾಪನೆಗೆ ಅಡ್ಡ ಬಂದವರನ್ನೆಲ್ಲ 'ಕೊಲ್ಲಿರಿ ಇಲ್ಲವೆ ಸಾಯಿರಿ' ಎಂಬ ಘೋಷಣೆಯು 'ಜೆಹಾದ'ವು ಸಾರಲ್ಪಟ್ಟಿತು ಇಷ್ಟೇ ಅಲ್ಲದೆ ಇತ್ತಿಹಾದುಲ್‌ ಮುಖಂಡರು ನಮ್ಮ ಹೈದರಾಬಾದವು ಹಿಂದುಸ್ತಾನದಲ್ಲುಳಿದ ೮ ಕೋಟಿ ಮುಸಲ್ಮಾನರ ನೆಲೆವೀಡು ಎಂದು ಘೋಷಿಸತೊಡಗಿದರು. ದೇಶದ ಯಾವದೋ ಒಂದು ಮೂಲೆಯಲ್ಲಿ ಮಾತ್ರ ವಿದ್ಧಂಸನ್ನು ಇದ್ದರು ಈ ಸಂದರ್ಭದ ಲಾಭ ಪಡೆದು ಬಿಡದೆ ಇಲ್ಲ. ಇನ್ನಷ್ಟು ಅರಾಜಕತೆಯನ್ನು ಮಾಡುತ್ತಿದ್ದಾರೆ.

ನನಗೆ ಇದನ್ನೆಲ್ಲ ಸಹಿಸುವದಾಗಲಿಲ್ಲ. ಈ ಬಗೆಯ ಅರಾಜಕತೆಯನ್ನೂ ಪುಂಡಾಟಿಕೆಯನ್ನೂ ಕಠೋರ್ಕಣ್ಣವಾಗಿ ಹತ್ತಿಕ್ಕಬೇಕೆಂದು ನಾನು ಒತ್ತಾಯಪಡಿಸಿದೆನಲ್ಲದೆ ಜನತೆಗೆ ಸುಖ ಶಾಂತಿ ಕೊಡದ ಸರಕಾರ ಪದಭ್ರಷ್ಟವಾಗುವದೇ ವಿಹಿತವೆಂದು ವಾದಿಸಿದೆನು. ಆದರೆ ಇವೆಲ್ಲ ಬೋರ್ಗಲ್ಲ ಮೇಲೆ ಸುರಿದ ಮಳೆಯಂತೆ ವ್ಯರ್ಥವೆಂದು ತೋರಿ, ಲೋಕ ಪರಿಪಾಲನದ ಕರ್ತವ್ಯವನ್ನು ಪೂರೈಸುವದು ಅಸಾಧ್ಯವಾಗಿ ಇಂತಹ ಪರಿಸ್ಥಿತಿಯಲ್ಲಿ ಅಧಿಕಾರಸ್ಥಾನದಲ್ಲಿ ಉಳಿಯುವದು ಪಾಪವೆಂದು ನನಗನಿಸಿ ನಾನು ನನ್ನ ಮಂತ್ರಿಪದಕ್ಕೆ ರಾಜೀನಾಮೆ ಕೊಟ್ಟಿದ್ದೇನೆ.

### ಆಳುವವರು ನಿಜಾಮರಲ್ಲ

ಒಟ್ಟಿನಲ್ಲಿ ಹೈದರಾಬಾದದಲ್ಲಿ ಈಗ ನಮ್ಮನ್ನಾಳುವವರು ನಿಜಾಮರಲ್ಲ, ಇತ್ತಿಹಾದುಲ್ ಮುಸಲ್ಮೀನ ಪಕ್ಷದವರು. ಹೈದರಾಬಾದವನ್ನು ಜಾತ್ಯತೀತ ರಾಷ್ಟ್ರವನ್ನಾಗಿ ಮಾಡಲು ಹೆಣಗಬೇಕೆನ್ನುವವರನ್ನೆಲ್ಲ ಹಿಡಿದು ಜೇಲಿಗೆ ಹಾಕುತ್ತಿದ್ದಾರೆ.

ಈ ಬಗೆಯ ಅನನ್ವಿತ ಅನ್ಯಾಯವನ್ನೂ ಅವ್ಯವಸ್ಥೆಯನ್ನೂ ತಡೆಯಲು ವಜ್ರಮುಷ್ಟಿಯೇ ಬೇಕು. ಒಂದು ಕ್ಷಣ ವಿಲಂಬವಾದರೂ ಅದು ಕೋಟ್ಯಂತರ ಜನರಿಗೆ ವಿಷ ನಿಮಿಷವಾಗಿ ಪರಿಣಮಿಸುವದು. ಇದನ್ನು ಮನದಂದು ನಿಜಾಮ ದೊರೆಗಳು ಇನ್ನಾದರೂ ತಮ್ಮ ಪ್ರಜೆಗಳಿಗೆ ಒದಗಿದ ಗಂಡಾಂತರವನ್ನು ನಿವಾರಿಸಲು ತಕ್ಕ ಉಪಾಯ ಹೂಡುವರೆಂದು ಹಾರೈಸುವೆ.

---

## ಭಾಷಾವಾರ ಪ್ರಾಂತರಚನೆ

### ಮಹಾತ್ಮರ ಸೂಚನೆಗಳ ಚರ್ಚೆ

### ದಿಲ್ಲಿಯಲ್ಲಿ ಪ್ರಾಂತೀಯ ಮುಂಖಂಡರ ಸಭೆ

ಮಹಾತ್ಮಾ ಗಾಂಧಿಯವರ ಸೂಚನೆಗಳ ತಳಹದಿಯ ಮೇಲೆ ಭಾಷಾವಾರ ಪ್ರಾಂತ ರಚನೆಯ ಕುರಿತು ವಿಚಾರ ಮಾಡಲು ೨೬ ಜೂಂಜಾನೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಸಮಿತಿಯ ಅಧ್ಯಕ್ಷರಾದ ಶ್ರೀ ಎಸ್ ನಿಜಲಿಂಗಪ್ಪನವರು ಡಾ. ರಾಜೇಂದ್ರ ಪ್ರಸಾದರ ಮನೆಯಲ್ಲಿ ಒಂದು ಸಭೆಯನ್ನು ಕರೆದಿದ್ದರು. ತಮಿಳನಾಡು ಮಹಾರಾಷ್ಟ್ರ, ಮಧ್ಯಪ್ರಾಂತ ಮತ್ತು ವರ್‍ಹಾಡ ಮಹಾಕೋಸಲ ಪ್ರಾಂತಿಕ ಕಾಂಗ್ರೆಸ ಸಮಿತಿಗಳ ಅಧ್ಯಕ್ಷರು ಸಭೆಗೆ ಬಂದಿದ್ದರು. ಡಾ. ರಾಜೇಂದ್ರ ಪ್ರಸಾದರೂ ದಯಮಾಡಿಸಿದ್ದರು.

ಶ್ರೀ ದಿವಾಕರರ ಕೆಳಗಿನ ಕರಡು ಚರ್ಚಿಸಲ್ಪಟ್ಟಿತು.

೧೯೨೦ ರಲ್ಲಿ ಕಾಂಗ್ರೆಸು ಹಾಕಿಕೊಟ್ಟ ಪ್ರಾಂತಿಕ ಗಡಿಗಳನ್ನು ಮನ್ನಿಸಬೇಕು ಮತ್ತು ನೆರೆಯ ಪ್ರಾಂತದ ಸಮ್ಮತಿಯಿಂದ ಈ ಗಡಿಗಳಲ್ಲಿ ಅವಶ್ಯವೆನಿಸಿದ ಮಾರ್ಪಾಟುಗಳನ್ನು ಮಾಡಿಕೊಳ್ಳಬಹುದು.

ಯಾವದೊಂದು ಗಡಿ ಪ್ರದೇಶದ ವಿಷಯದಲ್ಲಿ ಒಮ್ಮತವಾಗದಿದ್ದರೆ ಅದು ಪರಿಸ್ಥಿತಿ ಸುಧಾರಿಸಿದ ಬಳಿಕ ಸ್ಥಾಪಿತವಾಗಲಿರುವ, ಗಡಿ ಸಮಿತಿಯಿಂದ ನಿರ್ಣಯ ಸಿಗುವ ವರೆಗೆ ೧೯೨೦ ರಲ್ಲಿ ಕಾಂಗ್ರೆಸಿನಿಂದ ಯಾವ ಪ್ರಾಂತಕ್ಕೆ ಸೇರಿಸಲ್ಪಟ್ಟಿತ್ತೋ ಅಲ್ಲಿಯೇ ಇರಬೇಕು.

ಈ ಪ್ರದೇಶಗಳಲ್ಲಿ ನೆರೆಯ ಪ್ರಾಂತದ ಹಿತಕ್ಕೆ ಬಾಧೆ ಬರುವಂತೆ ಏನೂ ಮಾಡುವದಿಲ್ಲವೆಂದು ಎಲ್ಲ ಪ್ರಾಂತಗಳು ಬಂಧನವನ್ನು ಹಾಕಿಕೊಳ್ಳಬೇಕು.

ಘಟನಾ ಸಮಿತಿಯ ಆಯಾಯ ಪ್ರಾಂತಗಳ ಸದಸ್ಯರೊಡನೆ ಈ ಕರಡು ಚರ್ಚಿಸಲ್ಪಡಬೇಕು. ಮತ್ತು ಸಣ್ಣ ಸಣ್ಣ ಸಮಿತಿಗಳನ್ನು ಸ್ಥಾಪಿಸಿಕೊಂಡು ನೆರೆಯ ಪ್ರಾಂತದ ಇಂಥ ಸಮಿತಿಗಳೊಡನೆ ಒಮ್ಮತಕ್ಕೆ ಬರಬೇಕೆಂದು ನಿರ್ಣಯವಾಯಿತೆಂದು ತಿಳಿಯುತ್ತದೆ.

---

## ಮಂಗಳೂರ ಉಡಪಿ ರೇಲ್ವೆ ಮಾರ್ಗದ ಅವಶ್ಯಕತೆ

### ಉಡಪಿ ನಗರ ಸಭೆಯ ಬೇಡಿಕೆಗಳು

ದಿನಾಂಕ ೨೦ ರಲ್ಲಿ ಸಂಜೆ ಐದು ಗಂಟೆಗೆ ನಗರ ಸಭಾಧ್ಯಕ್ಷ ಶ್ರೀ ಉಪೇಂದ್ರ ಶ್ರೀನಿವಾಸ ಪಾಯ್ಕರ ಅಧ್ಯಕ್ಷತೆಯಲ್ಲಿ ಕೂಡಿದ ಉಡಪಿ ನಗರ ಸಭೆಯಲ್ಲಿ ಈ ಆಶಯದ ಗೊತ್ತುವಳಿ ಸ್ವೀಕೃತವಾದವು.

#### ಮಲ್ಪೆಬಂದರದ ಅಭಿವೃದ್ಧಿ

ಮಲ್ಪೆ ಬಂದರವನ್ನು ಪ್ರಬುದ್ಧ ಬಂದರವನ್ನಾಗಿ ಮಾಡುವಂತೆ ಕೇಂದ್ರ ಸರಕಾರವನ್ನು ಒತ್ತಾಯಿಸುವಂತೆ ಮದ್ರಾಸ ಸರಕಾರವನ್ನು ಕೇಳಿಕೊಳ್ಳುವ ಮತ್ತು ಮಂಗಳೂರ ಉಡುಪಿಗೆ ರೇಲ್ವೆ ಮಾರ್ಗ ಬೇಗನೆ ಆಗಬೇಕೆನ್ನುವ ಶ್ರೀ ಕೆ. ಕಮಲಾಕ್ಷ ಪೈಗಳ ಗೊತ್ತುವಳಿ ಸ್ವೀಕೃತವಾಯಿತು. ಕಾನೂನು ದೃಷ್ಟಿಯಿಂದ ಮೇಲಿನ ಗೊತ್ತುವಳಿಗಳ ಕುರಿತು ಶ್ರೀ, ಎಂ. ಮಂಜುನಾಥರಾಯರು ವಿಧಿಬಿಂದುವನ್ನು ಎತ್ತಿದರು. ಆದರೆ ಅದಕ್ಕೆ ಅಧ್ಯಕ್ಷರು ಸಮ್ಮತಿಸಲಿಲ್ಲ.

#### ಮದ್ರಾಸ ಸಿನೇಟ್ ಚುನಾವಣೆ

ಮಂಗಳೂರ ಉಡುಪಿ ಮುನಸಿಪಾಲಟಿಗಳಿಗೆ ಮದ್ರಾಸ ವಿಶ್ವವಿದ್ಯಾಲಯದಲ್ಲಿ ತಕ್ಕ ಒಂದು ಸ್ಥಾನಕ್ಕೆ ಉಡುಪಿ ನಗರ ಸಭೆಯ ಸದಸ್ಯರಾದ ಶ್ರೀಮತಿ ಲೀಲಾಬಾಯಿ ಕಾಮತರು ಎರಡು ಮತಗಳನ್ನು ಹೆಚ್ಚಿಗೆ ಪಡೆದು ಆರಿಸಲ್ಪಟ್ಟಿರುವರು. ಶ್ರೀಮತಿಯವರಿಗೆ ೨೮ ಅವರ ಪ್ರತಿಕಕ್ಷಿಗರಿಗೆ ೨೬ ಮತಗಳು ದೊರೆತಿವೆಯಂತೆ.

---

## ಹುಬ್ಬಳ್ಳಿಯಲ್ಲಿ ವಿಮಾನ ನಿಲ್ದಾಣ

### ಹಿಂದುಸ್ತಾನ ಸರಕಾರದ ಯೋಚನೆ

ಅಜಮೀರ, ಅಲೀಗಡ, ಬರ್ಹಾನಪುರ ಕಾಲಿಕತ್ತ, ಗುಜಲೂರ, ಡೆಹರಾಡೂನ, ಹುಬ್ಬಳ್ಳಿ ಮಂಗಳೂರ, ನೆಲ್ಲೂರ, ಉದಕ ಮಂಡ, ಸೇಲಂ ರತ್ನಾಗಿರಿ, ಸಾಗೂರ ಮತ್ತು ಸುರತ ಈ ಹದಿನಾಲ್ಕು ಸ್ಥಳಗಳಲ್ಲಿ ಹೊಸ ವಿಮಾನ ನಿಲ್ದಾಣಗಳನ್ನು ಕಟ್ಟಬೇಕೆಂದು ಹಿಂದುಸ್ತಾನ ಸರ್ಕಾರದವರು ಯೋಚಿಸಿದ್ದಾರೆ.

# ನಾ ಕಂಡ ಹೆನ್ರಿ ವ್ಯಾಲೇಸ್

## ವಿಶೇಷ ಲೇಖನ ೧೨

ನಾಡಿಗ ಕೃಷ್ಣಮೂರ್ತಿ ( ಅಮೇರಿಕಾ )

"ನೀವು ಮುಂದಿನ ಅಮೇರಿಕದ ಅಧ್ಯಕ್ಷ ಚುನಾವಣೆಗೆ ನಿಲ್ಲುತ್ತೀರಾ?"

"ಅಂತಹ ತುರುಸಿನ ( Ticklish ) ಪ್ರಶ್ನೆಗಳನ್ನು ಈಗ ಕೇಳಬೇಡಿ."

"ಮುಂದಿನ ಚುನಾವಣೆಯಲ್ಲಿ ನಿಮ್ಮ ಜೊತೆಗೆ ಉಪಾಧ್ಯಕ್ಷರಾಗಲು ಯಾವ ಜೊತೆಗಾರರನ್ನು ಆರಿಸಿಕೊಂಡಿದ್ದೀರಿ?"

"ಅದು ಪ್ರಮುಖ ಪ್ರಶ್ನೆಯಲ್ಲವೇ? ಈ ವಿಷಯಗಳ ಬಗ್ಗೆ ಕೆಲವು ಕಾಲದ ಮೇಲೆ ಉತ್ತರ ಕೊಡುತ್ತೇನೆ."

"ನೀವು ಈಗ ತಾನೆ ಪ್ಯಾಲೆಸ್ಟೈನ್‌ಗೆ ಹೋಗಿ ಬಂದಿರಿ. ಅಲ್ಲಿಯ ಪರಿಸ್ಥಿತಿಯನ್ನು ಕಣ್ಣಾರೆ ಕಂಡಿದ್ದೀರಿ. ಭಾರತದಲ್ಲಿ ವಿಭಜನೆಯಿಂದಾದ ಅನಾಹುತವನ್ನೂ ಕೇಳಿದ್ದೀರಿ. ಈ ಎಲ್ಲ ವಿಷಯಗಳನ್ನು ಪರ್ಯಾಲೋಚಿಸಿದಾಗ ಪ್ಯಾಲೆಸ್ಟೈನ್ ವಿಭಜನೆಯನ್ನು ನೀವು ಸಮರ್ಥಿಸುವಿರಾ?"

"ಈ ಪ್ರಶ್ನೆ ತುಂಬಾ ಜಟಿಲವಾದದ್ದು. ನನ್ನ ಮೂರು ವಾರದ ಪ್ಯಾಲೆಸ್ಟೈನ್ ಪ್ರವಾಸದಿಂದ ಅನೇಕ ವಿಷಯಗಳನ್ನು ತಿಳಿದುಕೊಂಡಿದ್ದೇನೆ. ಹಿರಿಯ ಅರಬ್ ಮತ್ತು (ಯಹೂದಿ ಜನ) ಮುಖಂಡರನ್ನು ಕಂಡು ಈ ಬಗ್ಗೆ ಮಾತುಕಥೆ ನಡೆಯಿತು. ಕೂಲಿಕಾರ ವರ್ಗದ ಜನತೆಯನ್ನೂ ಸಂದರ್ಶಿಸಿ ಅವರೊಡನೆ ಮಿಳಿತವಾದೆ. ನನ್ನ ಅನುಭವದ ಪ್ರಕಾರ, ಕೇವಲ ಕೆಲವು ಬುದ್ಧಿವಂತ ವರ್ಗದ ನಾಯಕರನ್ನು ಬಿಟ್ಟರೆ, ಜನಸಾಮಾನ್ಯ, ಅರಬ್ ಮತ್ತು ಯಹೂದಿಗಳಿಗೆ ವಿಭಜನೆಯೆಂದರೇನು ಗೊತ್ತೇ ಇಲ್ಲ. ಯು. ಎನ್. ಓ. ದಲ್ಲಾಗುತ್ತಿರುವ ಸುದ್ದಿಯೂ ಅವರಿಗೆ ಗೊತ್ತಿಲ್ಲ. ಆದರೆ ನನ್ನ ಅಭಿಪ್ರಾಯದಲ್ಲಿ ಅರಬ್ ಮತ್ತು ಯಹೂದಿಗಳ ಮುಂದಿನ ಏಳಿಗೆಯ ದೃಷ್ಟಿಯಲ್ಲಿ ಇಬ್ಬರಿಗೂ ಒಪ್ಪಿತವಾಗುವ ರೀತಿಯಲ್ಲಿ ವಿಭಜನೆ ಮಾಡಬೇಕು. ಇನ್ನು ಭಾರತದ ಉದಾಹರಣೆಯನ್ನು ತೆಗೆದುಕೊಳ್ಳುವಾ. ಭಾರತದ ಬಗ್ಗೆ ನನಗೆ ತುಂಬಾ ಗೌರವ. ಮಹಾನಾಯಕರಾದ ಮ. ಗಾಂಧಿ, ಜವಾಹರಲಾಲ ನೆಹರು, ಸರ್ದಾರ್ ಪಟೇಲ್ ಮುಂತಾದವರನ್ನು ಪಡೆದ ಹಿರಿಯ ನಾಡು. ಇಂದು ವಿಭಜನೆಯಾದದ್ದು ತುಂಬಾ ವಿಷಾದಕರ. ನಾನು ಭಾರತಕ್ಕೆ ಹಿಂದೆ ಬಂದಾಗ್ಗೆ ನಿಮ್ಮ ಅನೇಕ ಮುಖಂಡರನ್ನು ಭೇಟಿ ಮಾಡಿದ್ದೇನೆ. ಈಗ ವಿಭಜನೆಯೇನೋ ಆಗಿ ಹೋಯಿತು. ನಂತರ ನಡೆದ ದಂಗೆಗಳು, ರಾಷ್ಟ್ರದ ಹಿರಿಯ ಗುರಿಯನ್ನು ಸಾಧಿಸುವಾಗ ನಡೆದೇ ನಡೆಯುವವು. ಆದರೆ ದಂಗೆಗಳು, ಕೊಲೆಗಳು ಪತ್ರಿಕೆಗಳು ಚಿತ್ರಿಸಿದ ಪ್ರಮಾಣದಲ್ಲಿ ನಡೆದವೆಂದು ನಾನು ನಂಬಲಾರೆ. ಕಾರಣ, ನಾನು ಅಮೇರಿಕೆಯಲ್ಲಿದ್ದಾಗ ಪ್ಯಾಲೆಸ್ಟೈನ್ ವಿಚಾರ ಅನೇಕವಾಗಿ ಓದಿದ್ದೆ. ಪ್ಯಾಲೆಸ್ಟೈನಿಗೆ ಹೋದಾಗ ಆ ಸುದ್ದಿಗಳಲ್ಲಿ ಅನೇಕವು ಬಹು ಅತಿರೇಕವಾಗಿ ಚಿತ್ರಿಸಿದವಾಗಿದ್ದವು. ಭಾರತದ ಸುದ್ದಿಗಳೂ ಹಾಗೆಯೇ ಹಾಗೆಂದು ನಾನು ಸುದ್ದಿಗಾರರ ಸುದ್ದಿಗಳೆಲ್ಲವೂ ಸುಳ್ಳು ಎನ್ನುವುದಿಲ್ಲ. ಭಾರತದ ಬಗ್ಗೆ ಬಂದ ಕೆಲವು ಸುದ್ದಿಗಳು ತುಂಬ ಅತಿರಂಜಿತವಾಗಿವೆ."

"ಮಹಾತ್ಮ ಗಾಂಧಿಯವರ ಬಗ್ಗೆ ನಿಮ್ಮ ಅಭಿಪ್ರಾಯವೇನು?"

"ಮ. ಗಾಂಧಿಯವರು ಪ್ರಪಂಚದ ವಿಭೂತಿ ಪುರುಷರಲ್ಲೊಬ್ಬರು. ಅವರ ಕೈವಾಡವಿಲ್ಲದಿದ್ದರೆ ಭಾರತಕ್ಕೆ ರಕ್ತಪಾತವಿಲ್ಲದೆ, ಸ್ವಾತಂತ್ರ್ಯ ಸಿಕ್ಕುವುದು ಕನಸಿನ ಮಾತಾಗಿತ್ತು. ಭಾರತದ ಸ್ವಾತಂತ್ರ್ಯೋದಯ ಸಮಯದಲ್ಲಿ, ಪ್ರಪಂಚ ಮೂರನೆ ಯುದ್ಧದ ಮಾತು ಆಡುತ್ತಿರುವಾಗ, ಗಾಂಧಿಯವರು ಜೀವಿಸಿರುವುದು, ನಿಮ್ಮ ಪುಣ್ಯ, ನಮ್ಮ ಭಾಗ್ಯ."

"ಹಾಗಾದರೆ, ನೀವು ಗಾಂಧಿಯವರ ಅಹಿಂಸಾ ತತ್ವವನ್ನು ಒಪ್ಪಿಕೊಳ್ಳುತ್ತೀರಾ?"

"ಗಾಂಧಿಯವರ ಬಗ್ಗೆ ನಾನು ಚೆನ್ನಾಗಿ ತಿಳಿದುಕೊಂಡಿಲ್ಲ. ಅವರ ಅಹಿಂಸೆಯ ತತ್ವ ಶ್ರೇಷ್ಠವಾದದ್ದೇನೋ ನಿಜ. ಆದರೆ ಪ್ರಪಂಚ ಹಿಂಸೆಯಲ್ಲಿ ತೊಡಗಿ ನರಮೇಧ ಮಾಡುತ್ತಿರುವಾಗ, ನ್ಯಾಯ ಪ್ರತಿಪಾದಿಸಿ, ಪಾಶವೀ ಶಕ್ತಿಯನ್ನು ಅಡಗಿಸಲು; ಹಿಂಸೆಗೆ ಹಿಂಸೆಯೇ ಮದ್ದು. ಅಹಿಂಸೆ ಇನ್ನೂ ಹೆಚ್ಚು ಬುದ್ಧಿವಂತ ಪ್ರಪಂಚಕ್ಕೆ ಮತ್ತು ನೈತಿಕ ಮಟ್ಟ ಬೆಳೆದಿರುವ ಪ್ರಪಂಚಕ್ಕೆ ಯೋಗ್ಯವಾದೀತು. ಅಹಿಂಸೆಯ ಬಗ್ಗೆ ನನ್ನದು ಕೊನೆಯ ನಿರ್ಧಾರವಿಲ್ಲ, ಆ ಬಗ್ಗೆ ಹೆಚ್ಚು ಅಭ್ಯಾಸ ಮಾಡಬೇಕು."

ಮೇಲ್ಕಂಡ ಸಂಭಾಷಣೆ ನನಗೂ, ಶ್ರೀ. ಹೆನ್ರಿ

ನೆಯ ಪಕ್ಷ ಸ್ಥಾಪಿಸಲು ಹವಣಿಸುತ್ತಿರುವ ಈ ಮಹಾ ನಾಯಕರನ್ನು ನೋಡಬೇಕೆಂದು, ಅವರಿಗೊಂದು ಕಾಗದ ಬರೆದೆ. ತಕ್ಷಣ ಉತ್ತರ ಬಂತು ಅವರಿಂದ. ತಾವು ನವೆಂಬರ್ ೧೪ಕ್ಕೆ ಸೆಂಟ್‌ಲೂಯಿಸ್ ನಗರಕ್ಕೆ ಬರುವುದಾಗಿಯೂ, ಅಂದು ತಮ್ಮನ್ನು ಭೇಟಿಮಾಡಬಹುದೆಂದೂ ತಿಳಿಸಿದ್ದರು. ಅಂದು ಬೆಳಿಗ್ಗೆ ೧೧ ಗಂಟೆಗೆ ನಮ್ಮ ಭೇಟಿಯೆಂದು ಗೊತ್ತಾಯಿತು. ಸೆಂಟಲೂಯಿಸ್‌ನ ಸುಂದರವಾದ ಹೋಟೆಲ್, 'ಸ್ಟ್ಯಾಟ್ಲರ್'ನ ೧೧೧೪ನೇ ಕೊಠಡಿಯಲ್ಲಿ, ಹೆನ್ರಿ ವಾಲೇಸ್ ತಮ್ಮ ಕಾರ್ಯದರ್ಶಿನಿಯೊಂದಿಗೆ ಮಾತನಾಡುತ್ತ ಕುಳಿತಿದ್ದರು. ನನ್ನ ಭಾರತೀಯ ಉಡುಪನ್ನು ನೋಡಿ ಜೊತೆಗೆ ಕುಳಿತಿದ್ದ ಇನ್ನೊಬ್ಬ ಡೆಮೊಕ್ರಾಟಿಕ್ ನಾಯಕರಾದ ಶ್ರೀ. ಬ್ಲ್ಯಾಂಡನ್ ಕಿಂಗ್‌ಡನ್‌ರ ಕಡೆ ಕೈತೋರಿಸುತ್ತ ನಗುನಗುತ್ತ "See this man from Gandhi's Country He is wearing a Gandhi Hat" "ಇದೋ ಇವರು ಗಾಂಧಿ ದೇಶದವರು; ಗಾಂಧಿ ಟೊಪ್ಪಿಗೆ ಧರಿಸಿದ್ದಾರೆ" ಎಂದು ನನ್ನನ್ನು ಬರಮಾಡಿಕೊಂಡರು. ಗಾಂಧೀಜಿಯವರ ಹೆಸರು ಇಷ್ಟು ಹೃದ್ಗತವಾಗಿರುವುದನ್ನು ಕಂಡು ಹರ್ಷ ಹೆಮ್ಮೆ ಉಕ್ಕಿ ಹರಿಯಿತು. ಚಹಾಪಾನದ ನಂತರ ಮೇಲ್ಕಂಡ ಪ್ರಶ್ನೋತ್ತರಗಳಾದವು. ಈ ಭೇಟಿಯ ಪರಿಣಾಮವಾಗಿ, ಈ ವ್ಯಕ್ತಿ ಇಂದು ನಾಳೆಯಾದರೂ ಅಮೇರಿಕದ ಅಧ್ಯಕ್ಷ ಪಟ್ಟದ ವಾರಸುದಾರ ಎಂಬ ಅಭಿಪ್ರಾಯ ನನ್ನಲ್ಲಿ ಮೂಡಿತು.

ಅಮೇರಿಕದ ಅಧ್ಯಕ್ಷ ಚುನಾವಣೆ ಹತ್ತಿರಕ್ಕೆ ಬರುತ್ತಾ, ಶ್ರೀ. ಹೆನ್ರಿ ವ್ಯಾಲೇಸರ ಹೆಸರೂ ಎಲ್ಲ ಕಡೆಗಳಿಂದಲೂ ಕೇಳಬರುತ್ತಿದೆ. ಅಧ್ಯಕ್ಷ ರೂಜವೆಲ್ಟರ ಬಲಗೈಯಂತಿದ್ದ ಹೆನ್ರಿ ವ್ಯಾಲೇಸರೇ ಮುಂದಿನ ಅಧ್ಯಕ್ಷ ಗದ್ದುಗೆಗೆ ಅರ್ಹರು ಎಂದು ಅನೇಕ ಸಂಸ್ಥೆಗಳು ಸಾರಿವೆ. ಬಹುಸಂಖ್ಯಾಕ ಜನರ ಆಸೆಯೂ ಅದೇ ಆಗಿದೆ. ಹೆನ್ರಿ ವ್ಯಾಲೇಸರೂ ಕೂಡ ಸಂಸ್ಥಾನಾದ್ಯಂತ ಪ್ರವಾಸ ಕೈಗೊಂಡು ಮೂರನೆಯ ಪಕ್ಷದ ಸ್ಥಾಪನೆಗೆ ಬೀಜ ಬಿತ್ತುತ್ತಿದ್ದಾರೆ. ಎಲ್ಲ ಕಡೆಗಳಲ್ಲಿಯೂ ಅಮೇರಿಕೆಯ ಪ್ರಗತಿಶೀಲ ನಾಗರಿಕ ಸಂಸ್ಥೆಯ (Progressive Citizens of America) ಶಾಖೆಗಳು ಸ್ಥಾಪಿತವಾಗಿವೆ. ಅಧಿಕಾರಿಯುತರಾಗಿ ವ್ಯಾಲೇಸರು, ಡೆಮೊಕ್ರಾಟಿಕ್ ಪಕ್ಷದಿಂದ ಹೊರಬಿದ್ದು, ಮೂರನೆಯ ಪಕ್ಷದ ಸ್ಥಾಪನೆಯಾಯಿತೆಂದು ಹೇಳುವುದೊಂದೇ ಉಳಿದಿದೆ.

ಅಧ್ಯಕ್ಷ ರೂಸವೆಲ್ಟರ "ನವವಿಧಾನ" (New Deal) ) ತತ್ವವನ್ನು ಕಾರ್ಯರೂಪಕ್ಕೆ ತಂದು ಯಶಸ್ವಿಮಾಡಿದ ಕೀರ್ತಿ ವ್ಯಾಲೇಸರದು. ೧೩ ವರ್ಷಗಳ ಕಾಲ ಅಮೇರಿಕದ ಸರಕಾರದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿ ಕೆಲಸ ಮಾಡಿದರು. ಮೊದಲು ವ್ಯವಸಾಯ ಮಂತ್ರಿಯಾಗಿ ೧೯೪೦ರಲ್ಲಿ ಅಮೇರಿಕದ ಉಪಾಧ್ಯಕ್ಷರಾಗಿ, ೧೯೪೪ ರಲ್ಲಿ ವ್ಯಾಪಾರ ಮಂತ್ರಿಯಾಗಿ ದುಡಿದರು. ಇವರ ಕಾರ್ಯ, ಕ್ಷೇತ್ರ, ರಾಜಕೀಯ ಮುನ್ನೋಟ, ಬೇಸಾಯದಲ್ಲಿರುವ ಆಸಕ್ತಿಯನ್ನು ಕಂಡು, ಅಮೇರಿಕದ ಜನ ಇವರನ್ನು ೨೦ನೇ ಶತಮಾನದ ರಾಜಕೀಯ ಗುರು ಎನ್ನುತ್ತಾರೆ. ಅಮೇರಿಕದ ರೈತರಂತೂ ವ್ಯಾಲೇಸರ ವ್ಯವಸಾಯ ನೀತಿಯನ್ನು ಕೊಂಡಾಡಿ. ಅವರಲ್ಲಿ ಒಬ್ಬ ಮುಖಂಡನನ್ನು ಕಂಡುಕೊಂಡಿದ್ದಾರೆ. ೧೯೪೬ನೇ ಸೆಪ್ಟಂಬರ್ ತಿಂಗಳಲ್ಲಿ ನ್ಯೂಯಾರ್ಕಿನ ಮ್ಯಾಡಿಸನ್ ಚೌಕದಲ್ಲಿ ಮಾಡಿದ ಬಹಿರಂಗ ಭಾಷಣದ ಪ್ರತಿಕ್ರಿಯೆಯ ಫಲವಾಗಿ, ಟ್ರೂಮನ್ ಮಂತ್ರಿಮಂಡಲದಿಂದ, ವ್ಯಾಲೇಸರು, ಕಡ್ಡಾಯವಾಗಿ ರಾಜೀನಾಮೆ ಕೊಡಬೇಕಾಯಿತು. ಅಂದಿನಿಂದ 'New Republic' ಎಂಬ ವಾರಪತ್ರಿಕೆಯ ಸಂಪಾದಕರಾಗಿ, ಅದರ ಮುಖಾಂತರ ತಮ್ಮ ರಾಜಕೀಯ ತತ್ವವನ್ನು ಜನತೆಗೆ ಬೀರುತ್ತಿದ್ದಾರೆ. ಇವರ ಸಂಬಳ ತಿಂಗಳಿಗೆ ೧೨೫೦ ಡಾಲರುಗಳು.

೧೮೮೮ನೇ ಅಕ್ಟೋಬರ್ ೭ನೇ ತಾರೀಖು ಐಯೋವಾ ಸಂಸ್ಥಾನದ, ಅಡೆಯರ್ ಕೌಂಟಿಯಲ್ಲಿ ಜನ್ಮವೆತ್ತಿದರು. ಇವರ ಪೂರ್ಣ ಹೆಸರು "ಹೆನ್ರಿ ಅಗಾರ್ಡ್ ವ್ಯಾಲೇಸ್" ಎಂದು. ಇವರ ತಂದೆ ಸ್ಕಾಟ್ಲೆಂಡ್‌ನವರು ತಾಯಿ ಐರ್ಲೆಂಡಿನವರು. ಇಲ್ಲಿಯೇ ಬಂದು ಬಹುಕಾಲ ನೆಲಸಿ ಈಗ ಅಮೇರಿಕನ್ನರಾಗಿದ್ದಾರೆ. ಇವರ ತಂದೆ ಶ್ರೀ. ಹೆನ್ರಿ ಕ್ಯಾಂಟ್‌ವೆಲ್ ವ್ಯಾಲೇಸರು, ಅಧ್ಯಕ್ಷ ಹಾರ್ಡಿಂಗ್‌ರ ಕಾಲದಲ್ಲಿ ವ್ಯವಸಾಯ ಮಂತ್ರಿ

ಹರ್ ರೂಸವೆಲ್ಟರ ಕ್ಯಾಂಟಿ, ಲೈಫ್ ಕಮೀಷನ್ನಿನ ಸದಸ್ಯರಾಗಿದ್ದರು. ಅವರೂ ರೈತ ವರ್ಗಕ್ಕೇ ಸೇರಿದವರು ತಮ್ಮ ೬೦ನೇ ವಯಸ್ಸಿನಲ್ಲಿ ಪ್ರೆಸ್ಬಿಟೇರಿಯನ್ ತತ್ವವನ್ನು ಪ್ರಚಾರ ಮಾಡಲಿಕ್ಕಾಗಿ ವ್ಯಾಲೇಸ್ ಫಾರ್ಮರ್ ಎಂಬ ಮಾಸಪತ್ರಿಕೆಯನ್ನು ಪ್ರಕಟಿಸಿದರು. ಅದರ ಮುಂಭಾಗದ ಪುಟದಲ್ಲಿ ಈ ಸಾಲುಗಳು ಪ್ರಕಟವಾಗಿದ್ದವು. ಉತ್ತಮ ಕೃಷಿ, ಸುವಿಚಾರ, ಸಮರ್ಪಕ ಜೀವನ "Good Farming. Clean Thinking Right Living" ಅವರು ೮೦ ನೇ ವಯಸ್ಸಿನಲ್ಲಿ, ಐಯೋವದ ಎಲ್ಲ ಜನರ ಪ್ರೀತಿಗೆ ಪಾತ್ರರಾಗಿದ್ದರು. ಎಲ್ಲರೂ ಅವರನ್ನು 'Uncle Henry' ಎಂದು ಕರೆಯುತ್ತಿದ್ದರು ೧೯೨೧ರ ವರೆಗೆ, ಹೆನ್ರಿ ಕ್ಯಾಂಟವೆಲ್ ವ್ಯಾಲೇಸರು ಆ ಪತ್ರಿಕೆಯನ್ನು ನಡೆಯಿಸಿಕೊಂಡು ಬಂದರು. ಅಧ್ಯಕ್ಷ ಹಾರ್ಡಿಂಗ ಕರೆ ಬಂದಾಗ ಪತ್ರಿಕೋದ್ಯಮ ಬಿಟ್ಟು ಮಂತ್ರಿಪದವಿಯನ್ನು ಸ್ವೀಕರಿಸಿದರು.

ಹೆನ್ರಿ ವಾಲೇಸರು ಈ ಪರಂಪರೆಯಲ್ಲಿ ಮೂರನೆಯವರು. ಐಯೋವದಲ್ಲಿಯೇ ತಮ್ಮ ಬಾಲ್ಯ ವಿದ್ಯಾಭ್ಯಾಸವನ್ನು ಮುಗಿಸಿ, ಐಯೋವ State College ನ್ನು ಸೇರಿ 'ವ್ಯವಸಾಯ' ವಿಷಯದಲ್ಲಿ ಡಿಗ್ರಿ ಪಡೆದರು. ಮೊದಲಿನಿಂದಲೂ ಇವರಿಗೆ ವ್ಯವಸಾಯದಲ್ಲಿ ಅಭಿರುಚಿಯಿತ್ತು. ಸುಂದರವಾಗಿ ಬೆಳೆದ ಬೀಜದ(Corn)ಬೆಳೆಯಲ್ಲಿ ಹವಿಬೆಳೆ ಬರುವದೆಂದು ಪ್ರಯೋಗ ಪೂರ್ವಕವಾಗಿ ವಾಲೇಸರು ಕಂಡುಹಿಡಿದು ಎಲ್ಲ ರೈತರನ್ನು ದಿಗ್ಭ್ರಮೆ ಹಿಡಿಸಿದರು. ೧೯೧೦ ರಲ್ಲಿ ಬಿ. ಎಸ್. ಡಿಗ್ರಿ ಪಡೆದ ನಂತರ, ವ್ಯಾಲೇಸ ಫಾರ್ಮರ್ ಎಂಬ ಪತ್ರಿಕೆಯ ಉಪಸಂಪಾದಕರಾಗಿ ಕೆಲಸ ಮಾಡಿದರು. ವ್ಯವಸಾಯ ಬೆಳೆಯ ಬೆಲೆಯ ಅಭ್ಯಾಸದಲ್ಲಿ ವಿಶೇಷ ಶ್ರದ್ಧೆ ವಹಿಸಿ ಸಂಶೋಧನ ಪ್ರಾರಂಭ ಮಾಡಿದರು. ೧೯೨೦ ನೇ ಇಸ್ವಿಯ ವ್ಯವಸಾಯ ಬೆಳೆಯ ಕೆಳಗೆ ಬೀಳುವದನ್ನು ೧೯೧೯ ರಲ್ಲಿಯೇ ಭವಿಷ್ಯ ನುಡಿದ ಕೀರ್ತಿ ವಾಲೇಸರದು.

ತಂದೆ ವಾಷಿಂಗಟನ್ನದಲ್ಲಿ ಅದೇ ವಿಷಯದಲ್ಲಿ ಪ್ರತಿಪಾದಿಸುತ್ತಿರುವಲ್ಲಿ, ಮಗ ತನ್ನ ತಂದೆಯ ಪತ್ರಿಕೆಯ ಮುಖಾಂತರ, ಬೆಂಬಲ ಕೊಡುತ್ತಿದ್ದ ತಂದೆಯ ಮರಣಾನಂತರ, ವಾಲೇಸರೇ ಪತ್ರಿಕೆಯ ಸಂಪಾದಕರಾದರು. ೧೯೨೯ ರಲ್ಲಿ ಇನ್ನೊಂದು ಪತ್ರಿಕೆಯೂ ಇದರಲ್ಲಿ ಸೇರಿಕೊಂಡಿತು. ಹಣದ ದೃಷ್ಟಿಯಿಂದ ಇದು ಫಲಕಾರಿಯಾಗಲಿಲ್ಲವಾದರೂ, ೧೯೩೩ರ ವರೆಗೆ ವಾಲೇಸ್ ಸಂಪಾದಕತ್ವದಲ್ಲಿ ಇನ್ನೊಂದು ಸಂಶೋಧನೆ ಮಾಡಲು ಅನುಕೂಲವಾಯಿತು. ಹವಾಮಾನ, ಮತ್ತು ಮಳೆ, ಇವುಗಳ ವರ್ಷದ ಸರಾಸರಿ ಆಧಾರದ ಮೇಲೆ, ಕಾರ್ನ (ಕಾಳಿನ) ಬೆಳೆಯ ವರ್ಷದ ಮೊತ್ತವನ್ನು ಕಂಡುಹಿಡಿದರು. ಇದರ ಮುಖಾಂತರ ಇನ್ನೂ ಹೆಚ್ಚು ಹೇಗೆ ಬೆಳೆಯಬಹುದೆಂಬದನ್ನು ಕಂಡು ಹಿಡಿದರು. ಇವರ ಸಂಶೋಧನೆಗೆ ಕ್ಷುಧಾನಿವಾರಕ ( Hunger Fighters ) ಎಂದು ಕರೆದರು. ಅಮೇರಿಕದ ರೈತರೆಲ್ಲರೂ ವ್ಯಾಲೇಸರ ಮಿಶ್ರಜ ಬೀಜಗಳನ್ನು (Hybrid corn ) ಉಪಯೋಗಿಸಿ ಹೆಚ್ಚು ಬೆಳೆ ತೆಗೆದರು. ಅದರ ಫಲವಾಗಿ, ಅಮೇರಿಕದ ಅತ್ಯಂತ ದೊಡ್ಡದಾದ, ಪಾಯನಿಯರ ಹೈಬ್ರಿಡ್ ಕಾರ್ನ ಕಂಪನಿ (Pioneer Hi-Bred corn Company) ಸ್ಥಾಪಿತವಾಯಿತು. ವಾಲೇಸರೇ ಇದರ ವ್ಯವಸ್ಥಾಪಕ, ಅಧ್ಯಕ್ಷ ಮತ್ತು ಸಂಚಾಲಕರಾದರು. ಕಂಪೆನಿಯ ಲೆಖ್ಖದ ಪ್ರಕಾರ ೧೯೪೪ ರಲ್ಲಿ ಈ ಬೆಳೆಯ ವ್ಯಾಪಾರ ೪ ಮಿಲಿಯನ್ ಡಾಲರು ಮುಟ್ಟಿಕ್ಕೇರಿತು.

ವಾಲೇಸರ ತಂದೆ ಅಜ್ಜ, ರಿಪಬ್ಲಿಕ ಪಕ್ಷ ಸೇರಿದವರಾಗಿದ್ದರು ಅಂತೆಯೇ ವಾಲೇಸರು ೧೯೨೮ರ ವರೆಗೆ ರಿಪಬ್ಲಿಕನ್‌ರಾಗಿದ್ದರು ೧೯೨೮ ರಲ್ಲಿ ಅಲ್ ಸ್ಮಿಥ್ ಎಂಬ ಪ್ರಜಾಪಕ್ಷದ ಧುರೀಣರ ಅಧ್ಯಕ್ಷ ಚುನಾವಣೆಯಲ್ಲಿ ಬೆಂಬಲವಿತ್ತರು. ಕಾರಣ ಅವರ ಸಮಾಜ ಸುಧಾರಣೆಯ ಕಾರ್ಯಕ್ರಮ ಚೆನ್ನಾಗಿದೆ ಎಂದು ತಿಳಿದರು. ಹೆನ್ರಿ ಮಾರೆಂಥಾರವರ ಮುಖಾಂತರ ಅಂದಿನ ನ್ಯೂಯಾರ್ಕ ಗವರ್ನರ್ ಆಗಿದ್ದ ರೂಸವೆಲ್ಟರನ್ನು ಭೇಟಿ ಮಾಡಿದರು. ೧೯೩೨ ರಲ್ಲಿ ವಾಲೇಸರು,ರೂಸವೆಲ್ಟರ ಅಧ್ಯಕ್ಷ ಚುನಾವಣೆಗೆ ಬೆಂಬಲವಿತ್ತರು. ಆಗ ರಿಪಬ್ಲಿಕನ್ನರ ಪರವಾಗಿ ಹರ್ಬರ್ಟ ಹೂವರ್ ಚುನಾವಣೆಗೆ ನಿಂತಿದ್ದರು. ಆಗ ಐಯೋವ ಸಂಸ್ಥಾನವನ್ನು ಕೊನೆಯ ಘಳಿಗೆಯಲ್ಲಿ ರೂಸವೆಲ್ಟರ ಬೆಂಬಲದಂತೆ ಮಾಡಿದ ಯಶಸ್ಸು ವಾಲೇಸರದ್ದು. ಬಾಲ್ಯದ ಕನಸಾಗಿದ್ದ ಒಳ್ಳೆ ಫಲಪ್ರದ ಬೀಜ ಬೆಳೆವವರಿಗೆ ಜಗವು ಅನುಕೂಲವಾಗಿರಬೇಕು ಎಂಬ ಕತ್ತವು ಕಾರ್ಯರೂಪಕ್ಕೆ ತರಲು . ವಾಲೇಸರು, ರೂಸವೆಲ್ಟ ಮಂತ್ರಿ ಮಂಡಲದಲ್ಲಿ

ಮಂತ್ರಿಪದವಿ ವಹಿಸಿದ ಕೂಡಲೇ "ನಸ್ನಿಂದೆ ವ್ಯವಸಾಯಗಾರರಿಗೆ, ವ್ಯವಸಾಯಕ್ಕೆ ಅನುಕೂಲವಾಗದಿದ್ದರೆ, ನನ್ನ ಹೊಲಕ್ಕೆ ಓಡಿಹೋಗಿ ಕಾರ್ನ್ ಬೆಳೆ ಬೆಳೆಯುವೆನು" ಎಂದು ಹೇಳಿದರು ಅಮೇರಿಕದ ರೈತರ ಸಭೆಯೊಂದನ್ನು ಕರೆದು, ವ್ಯವಸಾಯ ಅಭಿವೃದ್ಧಿಯ ಕಾರ್ಯನೀತಿಯನ್ನು ಅನುಸರಿಸಿದರು. ಬೆಳೆಯು ಬೆಳೆಯನ್ನು ಹೆಚ್ಚಿಸುವ ಮಸೂದೆ ಸೆನೇಟ್ಟಿನಲ್ಲಿ ಪಾಸಾದಾಗ "ದೇವರೇ! ಕಳುಹಿಸಿಕೊಟ್ಟ ಮನುಷ್ಯ ವಾಲೇಸ್" ಎಂದು ಜನ ಹೊಗಳಿದರು.

೧೯೩೩ ರಿಂದ ೪೦ ರ ವರೆಗೆ ವ್ಯವಸಾಯ ಮಂತ್ರಿಯಾಗಿ ವ್ಯವಸಾಯ ಶಾಖೆಯನ್ನು ಅಭಿವೃದ್ಧಿಗೊಳಿಸಿದ್ದರೂ, ಅಧ್ಯಕ್ಷ ರೂಸವೆಲ್ಟರ 'ನವವಿಧಾನ' (New Deal) ತತ್ವದ ಬಲಗೈಯಾಗಿದ್ದರೂ, ೧೯೪೦ ರಲ್ಲಿ ಇವರ ಹೆಸರು ಉಪಾಧ್ಯಕ್ಷ ಚುನಾವಣೆಗೆ ಸೂಚಿತವಾದಾಗ, ವಿರೋಧ ಬರದೇ ಇರಲಿಲ್ಲ. ಅದೂ ಪ್ರಜಾಪಕ್ಷದಲ್ಲಿಯೇ ವಿರೋಧ ಬಂದಿತು. ೧೯೩೩ ರಿಂದಲೇ ವಾಲೇಸರ ಹೆಸರು ಅಧ್ಯಕ್ಷ ಪಟ್ಟಿಯಲ್ಲಿದ್ದುದರಿಂದ ವಾಲೇಸರು ಉಪಾಧ್ಯಕ್ಷ ಪದವಿಯನ್ನು ವಹಿಸುವ ಸುದ್ದಿ ದೇಶದಲ್ಲಿ ಆಶ್ಚರ್ಯವನ್ನುಂಟುಮಾಡಲಿಲ್ಲ. ನವೆಂಬರ್ ೫ ನೇ ತಾರೀಖು ೪೦ ನೇ ಇಸ್ವಿ, ಹೆನ್ರಿ ಅಗಾರ್ಡ ವಾಲೇಸರು ಅಮೇರಿಕದ ಉಪಾಧ್ಯಕ್ಷರಾಗಿ ಚುನಾಯಿತರಾದರು. ಅದೇ ವರ್ಷ ಅಧ್ಯಕ್ಷ ರೂಸವೆಲ್ಟರ ರಾಯಭಾರಿಯಾಗಿ ಮೆಕ್ಸಿಕೋ ನಗರಕ್ಕೆ ಪ್ರಯಾಣ ಬೆಳೆಸಿ ಅಲ್ಲಿಯ ರಾಷ್ಟ್ರ ಸಭೆ, 'ಕಾಮಾಕೋ'ದ ಉತ್ಸವದಲ್ಲಿ ಭಾಗವಹಿಸಿದರು. ನಂತರ ಇತರೆ ದಕ್ಷಿಣ ಅಮೇರಿಕದ ದೇಶಗಳಲ್ಲಿ ಹೋಗಿ ಮಧುರ ಬಾಂಧವ್ಯವೇರ್ಪಡಲು ಸಹಾಯ ಮಾಡಿದರು. ೧೯೪೧ ರಲ್ಲಿ ಚೈನಾ, ಸೈಬೇರಿಯಾ, ರಷ್ಯಾ ಮತ್ತು ಭಾರತಕ್ಕೆ ಬಂದು ಅಲ್ಲಿಯ ಸಂಗತಿಗಳನ್ನು ಕಣ್ಣಾರೆ ಕಂಡು ವಿಷಯ ಸಂಗ್ರಹಿಸಿ ಅಂತರ ರಾಷ್ಟ್ರೀಯ ಬಾಂಧವ್ಯದ ಬೀಜ ಬಿತ್ತಿದರು.

ವಾಲೇಸರು ಬರೀ ಹೆಸರಿಗೆ ಉಪಾಧ್ಯಕ್ಷರಾಗಿರಲಿಲ್ಲ. ತಮ್ಮ ಕೆಲಸದ ಜೊತೆಗೆ ಆರ್ಥಿಕ ಸಂರಕ್ಷಣಾ ಸಮಿತಿಗೆ (Economic Defence Board) ಅಧ್ಯಕ್ಷರಾಗಿದ್ದರು. ನಿರ್ದಿಷ್ಟ ಸ್ಥಳಗಳಿಗೆ ಪೂರೈಕೆ ಮಾಡುವ ಸಮಿತಿಗೆ(Supply Priorities and Allocations Board) ಛೇರಮನ್‌ರಾಗಿದ್ದರು. ಅಮೇರಿಕ ೧೯೪೨ ರಲ್ಲಿ ಪ್ರತ್ಯಕ್ಷವಾಗಿ ಯುದ್ಧದಲ್ಲಿ ಧುಮುಕಿದಾಗ ಅಧ್ಯಕ್ಷ ರೂಸವೆಲ್ಟರ (War Cabinet) ಯುದ್ಧ ಮಂತ್ರಿಮಂಡಲದ ಸದಸ್ಯರಾಗಿಯೂ ಇದ್ದರು. ರೂಸವೆಲ್ಟರ ನಾಲ್ಕನೆಯ ಕರ್ತವ್ಯ ಮೂಲಕ ನಾಲ್ಕನೆಯ ಸ್ವಾತಂತ್ರ್ಯ ಪ್ರಚಾರವನ್ನು (Four freedoms with the four duties) ಕಾರ್ಯರೂಪಕ್ಕೆ ತರಲು ಸಹಾಯರಾದವರು ವಾಲೆಸರೇ ಆ ನಾಲ್ಕು ಕರ್ತವ್ಯಗಳಾವುವೆಂದರೆ ಸಾಧ್ಯವಿದ್ದಷ್ಟು ಬೆಳೆ ಬೆಳೆಯುವದು ಯುದ್ಧರಂಗಕ್ಕೆ ಅದಷ್ಟು ಜಾಗ್ರತೆ ಅವುಗಳನ್ನು ಸಾಗಿಸುವದು ಎಲ್ಲ ಶಕ್ತಿಯನ್ನು ಕ್ರೋಢೀಕರಿಸಿ ಒಂದೇ ಮನಸ್ಸಿನಿಂದ ಹೋರಾಡುವದು, ಪ್ರಪಂಚದ ಶಾಂತತೆಯನ್ನು ಕಾಪಾಡಿ ಜನ, ತಾಳ್ಮೆ, ಸಹಿಷ್ಣುತೆ ಮತ್ತು ನ್ಯಾಯಮಾರ್ಗದಲ್ಲಿ ಹೋಗುವಂತೆ ಮಾಡಲು ಪ್ರಯತ್ನಿಸುವುದು.

೧೯೪೪ ರ ಅಧ್ಯಕ್ಷ ಚುನಾವಣೆಯಲ್ಲಿ ರೂಸವೆಲ್ಟರು,ವಾಲೇಸರಿಗೆ ಉಪಾಧ್ಯಕ್ಷರಾಗಲು ಸಾಕಷ್ಟು ಬೆಂಬಲ ಕೊಡಲಿಲ್ಲ. ಇವರಿಬ್ಬರಲ್ಲಿಯೂ ಭಿನ್ನಾಭಿಪ್ರಾಯಗಳಿಲ್ಲದಿದ್ದರೂ, ಇತರ ಪ್ರಜಾಪಕ್ಷದ ನಾಯಕರಿಗೆ ಹೆದರಿ ತನ್ನ ಸ್ಥಾನ ಬಿಗಿಯಾಗಿರಿಸಿಕೊಳ್ಳಲು ರೂಸವೆಲ್ಟರು ವಾಲೇಸರ ವಿಷಯದಲ್ಲಿ ಸ್ವಲ್ಪ 'ಸಡಿಲು' ಬಿಡಬೇಕಾಯಿತು. ಆದರೆ, ರೂಸವೆಲ್ಟರ ಮಂತ್ರಿಮಂಡಲದಲ್ಲಿ Secretary of State ಪದವಿಯೊಂದನ್ನು ಬಿಟ್ಟು ಯಾವ ಮಂತ್ರಿ ಪದವಿಯನ್ನೂ ವಹಿಸಿಕೊಳ್ಳಲು, ಆಹ್ವಾನ ಬಂದಿತು. ಆಗ ವಾಲೇಸರು ವ್ಯವಸಾಯ ಮಂತ್ರಿ ಪದವಿಯಿಂದ ವ್ಯಾಪಾರ ಮಂತ್ರಿ ಪದವಿಯನ್ನು ವಹಿಸಿಕೊಂಡರು.

ವಾಲೇಸರ ಮಂತ್ರಿಪದವಿ ಬಹುಕಾಲ ಉಳಿಯಲಿಲ್ಲ. ಅವರ ಗುರು ರೂಸವೆಲ್ಟ ಈ ಮರ್ತ್ಯ ತೀರಿಕೊಂಡರು. ಉಪಾಧ್ಯಕ್ಷರಾದ ಹ್ಯಾರಿ ಎಸ್ ಟ್ರೂಮನ್ನರು ಅಧ್ಯಕ್ಷ ಪದವಿಗೇರಿಸಲ್ಪಟ್ಟರು. ೧೯೪೬ ನೇ ನವೆಂಬರ್ ತಿಂಗಳಲ್ಲಿ ನ್ಯೂಯಾರ್ಕಿನ ಮ್ಯಾಡಿಸನ್ ಚೌಕದಲ್ಲಿ ಸಾವಿರಾರು ಜನರ ಸೇರಿದ ಸಭೆಯಲ್ಲಿ ರಾಜಕೀಯ ಭಾಷಣಮಾಡುತ್ತಾ, ಅಮೇರಿಕದ ಸರ್ಕಾರ ರಷ್ಯಾದೆಡೆ ದಿನದಿನಕ್ಕೆ ಬಿಸಿಬಿಸಿ ವಾತಾವರಣದಲ್ಲಿ ಬಂದು ಅದರ ಸಖ್ಯ ಕಹಿಯಾಗುತ್ತಿರುವದನ್ನು ತಿಳಿಸಿದರು. ಟ್ರೂಮನ್ನರ ನೀತಿಯನ್ನು ಖಂಡಿಸಿದುದರ ಫಲ, ವಾಲೇಸರ ರಾಜೀನಾಮೆ. ಆಗಿನ ಪರರಾಷ್ಟ್ರ ಮಂತ್ರಿ ಆಗಿದ್ದ ಜೇಮ್ಸ್ ಬೈರ್ನ್ಸರ ಭಾಷಣಕ್ಕೂ



ಶ್ರೀ ಗೋಪಾಲಸ್ವಾಮಿ ಅಯ್ಯಂಗಾರ ಮತ್ತು ಶೇಖ ಅಬ್ದುಲ್ಲಾರವರು ಭದ್ರತಾ ಮಂಡಲದಿಂದ ತಿರುಗಿ ದಿಲ್ಲಿಗೆ ಬಂದಾಗ ವಿಮಾನ ಗೃಹದಲ್ಲಿ ಸ್ವಾಗತವಿತ್ತವರ ಚಿತ್ರ.



[illegible] ರಂದು ಅಕ್ಷೋಭುರ್‍ದಲ್ಲಿ [illegible] ಯಲ್ಲಿ ಪಂಡಿತ ಜವಾಹರಲಾಲರು ಮಾತಾಡುತ್ತಿದ್ದಾರೆ. ಇಲ್ಲಿ ಗಾಂಧೀಜಿಯವರ ಕಲಶವನ್ನು ಕಾಣಬಹುದು.

# ವ್ಯಾಪಾರ ಪ್ರಪಂಚ

## ಮುಂಬಯಿ ಪೇಟೆ ಧಾರಣೆ

ಮುಂಬಯಿ ತಾ. ೨೬

### ಬಂಗಾರ

| | |
|---|---|
| ತಯಾರಿ | ೧೦೬—೮—೦ |

### ಬೆಳ್ಳಿ

| | |
|---|---|
| ತಯಾರಿ | ೧೫೧—೦—೦ |
| ಚೇಂಬರ | ೧೫೧—೧೪—೦ |
| ಸಾವರಿನ | ೬೯—೪—೦ |

### ಅರಳೆ

| | | |
|---|---|---|
| | | ೫೮೫—೦—೦ |
| ಮಾರ್ಚ | | ೫೭೫—೮—೦ |
| ಮೇ | | ೫೮೨—೦—೦ |
| ಜುಲೈ | | ೫೮೬—೦—೦ |
| ಸಪ್ಟಂಬರ | ೫೯೪-೦-೦ | — ೫೯೯-೦-೦ |
| ಹೆಚ್ಚು | ೫೮೦-೦-೦ | — ೫೮೧-೦-೦ |
| ಕಡಿಮೆ | | |

### ಎಣ್ಣೆ ಕಾಳುಗಳು

ತಾ. ೨೫

| | |
|---|---|
| ಶೇಂಗಾ ಹೊಸದು | ೧೫೯—೦—೦ |
| ಹೊಸ ಬೆಳೆ | ೧೫೭-೮-೦ |
| ಅಗಸೆ | ೨೮—೬—೦ |
| ಅಗಸೆ ಎಣ್ಣೆ | ೧೮—೬—೦ |

## ಸಾಂಗಲಿ ಪೇಟೆ

ತಾ. ೨೬

| | |
|---|---|
| ಅರಿಷಿಣ ಹೇರಿಗೆ | ೯೮-೧೦೫ |
| ಹೊಸ ಮೆಣಸಿನಕಾಯಿ | ೧೧೦-೧೫೦ |
| ಬೆಲ್ಲ ಹೇರಿಗೆ | ೪೫--೫೫ |
| ಶೇಂಗಾ ಖಂಡಿ | ೧೨೫--೧೨೭ |

## ಶಿವಮೊಗ್ಗೆ

ತಾ. ೨೬

ಶಿವಮೊಗ್ಗೆ ಅಡಿಕೆಪೇಟೆಯ ಧಾರಣೆ ಮಣ ೧ ಕ್ಕೆ ಈರೀತಿ ಇದೆ—

| | | | |
|---|---|---|---|
| ದೇಶಾವರ ನಂ. | ೧ | ಮಣ ೧ ಕ್ಕೆ | ೪೦-೪೨ |
| ,, | ,, ೨ | | ೩೮-೪೦ |
| ,, | ,, ೩ | | ೩೪-೩೮ |
| ರಾಜಾಅಲವು | | | ೩೫-೪೨ |
| ಕೋರಸಾಲು | | | ೨೮-೩೦ |
| ಬೆಟ್ಟೆ ಪಂತಿ | | | ೨೦—೨೮ |
| ಬೆಟ್ಟೆ | | | ೧೬-೧೮ |

ಸಿಲ್ಯಾತ ಸಾಕಷ್ಟು ಇದೆ. ಬೇಡಿಕೆ ಇದ್ದೇ ಇದೆ.

# ನಾ ಕಂಡ ಹೆನ್ರಿ ವ್ಯಾಲೇಸ್

( ೧೧ನೆಯ ಪುಟದಿಂದ )

ವ್ಯಾಲೇಸರ ಭಾಷಣಕ್ಕೂ ಅಜಗಜಾಂತರ ವ್ಯತ್ಯಾಸವಿದ್ದು, ಟ್ರೂಮನ್ನರನ್ನು ಅತಿಸಂದಿಗ್ಧ ಸ್ಥಿತಿಯಲ್ಲಿ ಬಿಟ್ಟಿತು. ೧೯೪೬ ನೇ ಸೆಪ್ಟಂಬರ್ ೨೦ನೇ ತಾರೀಖು ವಾಲೇಸರು ೧೩ ವರ್ಷಗಳ ಸೇವೆಯ ನಂತರ, ರಾಜೀನಾಮೆ ಕೊಟ್ಟರು. ಅದೇ ಜುಲೈ ತಿಂಗಳಲ್ಲಿ ವಾಲೇಸರು ಟ್ರೂಮನ್ನರಿಗೆ ಬರೆದ ೬೦೦೦ ಶಬ್ದದ ಹೇಳಿಕೆ ಬಹಿರಂಗಪಡಿಸಲಾಯಿತು. ಅದರಲ್ಲಿ ರಷ್ಯದಕೂಡ ಸರಕಾರದ ಅಣುಬಾಂಬಿನ ಸ್ಪರ್ಧೆಯನ್ನು ಟೀಕಿಸಿ ಬರ್ನಾಡು ಬರೂಚರವರ ಪರಮಾಣು ನೀಲಪತ್ರ (Atomic Blue Print) ವನ್ನು ಕಟುತರವಾಗಿ ಟೀಕಿಸಿದ್ದರು.

ಹಳೆಯ 'ನವವಿಧಾನ' (New Deal) ತತ್ವ ಪ್ರತಿಪಾದಕರಲ್ಲಿ ಟ್ರೂಮನ್ ಮಂತ್ರಿ ಮಂಡಲದಿಂದ ಹೊರಬಿದ್ದವರಲ್ಲಿ ಕೊನೆಯವರು ವಾಲೇಸ್ ಹೆರಾಲ್ಡ ಐಕ್ಸರು ಮೊದನೆಯವರು ಪ್ರಪಂಚದ ಶಾಂತಿಯನ್ನು ಕಾಪಾಡಲು ಹೆಣಗುವೆನೆಂದು ಸಾರಿದ ವ್ಯಾಲೇಸರು ಪತ್ರಿಕೋದ್ಯಮದಲ್ಲಿ ಧುಮುಕಿ ನ್ಯೂರಿಪಬ್ಲಿಕ್ ಪತ್ರಿಕೆಯ ಸಂಪಾದಕರಾದರು. ಈ ಪತ್ರಿಕೆಯ ಚಂದಾದಾರರ ವ್ಯಾಪ್ತಿ ೪೫೦೯೪. ವ್ಯಾಲೇಸರ ರಾಜೀನಾಮೆಯಿಂದ ಪ್ರಜಾಪಕ್ಷದ ಎಲುಬು ಮುರಿದಂತಾಗಿದೆ. ಇದೀಗ ಮೂರನೇ ಪಕ್ಷ ಸ್ಥಾಪಿಸುವ ಯೋಜನೆ ಪ್ರಜಾಪಕ್ಷದ ಧುರೀಣರನ್ನು ಕಳವಳಿಕ್ಕಾಗಿ ಮಾಡಿದೆ.

ವಾಲೇಸರು ರಾಜನೀತಿ ನಿಪುಣರಿದ್ದಂತೆ, ಗ್ರಂಥಕರ್ತರೂ ಹೌದು. ತಮ್ಮ ನೀತಿಯನ್ನು ಪ್ರತಿಪಾದಿಸಿ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಅದರಲ್ಲಿ "ಸಿಕ್ಸಟಿ ಮಿಲಿಯನ್ ಜಾಬ್ಸ" "ಅಮೇರಿಕಾ ಮಸ್ಟ ಚೂಜ" "ಟೆಕ್ನಾಲಜಿ ಕಾರ್ಪೋರೇಶನ್ಸ" "ದಿ ಜನರಲ್ ವೆಲ್‌ಫೇರ" "ದಿ ಪ್ರಾಯಿಸ್ ಅಫ್ ಫ್ರೀಡಮ್" "ದಿ ಸೆಂಚುರಿ ಅಫ್ ದಿ ಕಾಮನ್ನ ಮ್ಯಾನ್" ಮತ್ತು "ಸೋವಿಯಟ್ ಏಶಿಯಾ ಮಿಶನ್" ಬಹು ಮುಖ್ಯವಾದವು.

ವ್ಯಾಲೇಸರು ಸರಳ ಜೀವಿ. ದೇವರ ಇರುವಿಕೆಯಲ್ಲಿ ನಂಬಿಕೆಯುಳ್ಳವರು. ಆಗಾಗ್ಗೆ ಪುನಃ ಪುನಃ ಬೈಬಲ್ಲಿನಿಂದ ಉದಾಹರಿಸುತ್ತಾರೆ. ಜನರಲ್ಲಿ ಶಾಂತಿ ಸಂದೇಶ ಬೀರಿದುದಕ್ಕಾಗಿ ವ್ಯಾಲೇಸರಿಗೆ ೧೯೪೫ ನೇ ಚರ್ಚಮನ್ಸ ಬಹುಮಾನ ಸಿಕ್ಕಿತು. ವ್ಯಾಲೇಸರು ಕುಡಿಯುವುದಿಲ್ಲ. ಸಿಗರೇಟು ಸೇದುವುದಿಲ್ಲ.

ಮೊದಮೊದಲು ವ್ಯಾಲೇಸರು ಸರಿಯಾಗಿ ಉಡುಪು ಧರಿಸುತ್ತಿರಲಿಲ್ಲವಂತೆ. ಇವರು ಸರಕಾರದಲ್ಲಿ ಸಿಕ್ಕಷ್ಟು ವೇಷ ಧರಿಸಿದ ಮನುಷ್ಯ ಎಂದು ಪತ್ರಿಕಾಕರ್ತರು ಸರಕಾರಿ ಅಧಿಕಾರಿಗಳು ಅನ್ನುತ್ತಿದ್ದರು. ಬರಬರುತ್ತ ಅದು ಕಡಿಮೆಯಾಯಿತು. ವ್ಯಾಲೇಸರಿಗೆ [illegible] ರಷ್ಯನ್ ಭಾಷೆಗಳು ಬರುತ್ತಿದ್ದರೂ ರಾಜಕಾರಣದ [illegible] ವಿಲ್ಲ. ಯಾವಾಗಲೂ, ಏನೊಂದು [illegible] [illegible] ವ್ಯಾಲೇಸರ [illegible] [illegible] [illegible] ಹವ್ಯಾಸ (Hobby) [illegible] [illegible]

ಪುನಃ ಅದೇ [illegible] ವ್ಯಾಲೇಸ್ ಇಂದಲ್ಲ [illegible] ಸಂಯುಕ್ತ ಸಂಸ್ಥಾನದ [illegible] ಪ್ರಾರಂಭಿಸಿತು.

## ಕೊಲಂಬಿಯಾದಲ್ಲಿ ಹಿಂದೀ ವಿದ್ಯಾರ್ಥಿ ಸಂಘ

ಕೊಲಂಬಿಯಾದಲ್ಲಿ [illegible] ಹಿಂದೀ ವಿದ್ಯಾರ್ಥಿ ಸಂಘವು ಸ್ಥಾಪಿಸಲ್ಪಟ್ಟಿದೆ [illegible] ವಿದ್ಯಾಪೀಠದಲ್ಲಿ [illegible] ಕಲಿಯುತ್ತಿರುವ [illegible] ಮೂರ್ತಿಗಳು ಅದಕ್ಕೆ ಪ್ರಧಾನ ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು.

ಶಾಲೆಗಳಲ್ಲಿ ಹಿಂದೀ ವಿದ್ಯಾರ್ಥಿಗಳಿಗೆ ಪ್ರವೇಶ ದೊರಕಿಸುವುದು, ಅವರಿಗೆ ಊಟ ವಸತಿಗಳ ಅನುಕೂಲ ಮಾಡಿಕೊಡುವುದು ಹಿಂದೀ ಸಂಸ್ಕೃತಿಯನ್ನು ಪ್ರಸಾರ ಮಾಡುವುದು ಇವೇ ಸಂಘದ ಗೊತ್ತುಗುರಿಗಳು. ಹಿಂದೀ ವಿದ್ಯಾರ್ಥಿಗಳಿಗಾಗಿ ಅಲ್ಲಿ ಒಂದು ಹೈಸ್ಕೂಲನ್ನು ಸ್ಥಾಪಿಸುವ ಯೋಜನೆಯೂ ನಡೆದದೆ. ಇದ್ದವರಲ್ಲಿ ೮ ಜನ ಹಿಂದೀ [illegible]



ನಿಂತಿರುವವರು:- (೧) ಡಾ. ಎಸ್. ಕೃಷ್ಣಮೂರ್ತಿ (೨) ರಾಮ ಸುಭಾಗ್‌ಸಿಂಗ್ (೩) ಮಾರ್ಟಿನ್ (೪) ರಿಚ್‌ಮಂಡ್ (೫) ಶ್ರೀಮತಿ ಥಾರಂಟನ (೬) ಮಿರ್ಜಾ ಮುಜಫರ್ ಹಿರೋ (೭) ಶ್ರೀಮತಿ [illegible] (೮) ಬಿಂದು ಮಾಧವ ಕೊಣ್ಣೂರರು.

ಕುಳಿತಿರುವವರು:- ಡಾ॥ ಜೆ. ಡಿ. ಎಸ್. ಕುಮಾರನ್ (೨) ಶ್ರೀಮತಿ [illegible] (೩) ಡಾ॥ ಮಾಲ್ಕಂ ಆದಿಶೇಷಯ್ಯನವರು (ಅತಿಥಿಗಳು) (೪) ಡಾ॥ ಶ್ರೀಮತಿ ಜೆನ್ನಿ ಫ್ಲೆಮಿಂಗ್ಸರವರು (೫) ಜಿ. ಸಿ. ಅರೋರ.

[illegible] ಪಟೇಲ (೭) [illegible] ಕೃಷ್ಣಮೂರ್ತಿ (ಕಾರ್ಯದರ್ಶಿ).

# ಕರ್ನಾಟಕ

## ಧಾರವಾಡ

ಧಾರವಾಡ ನಗರ ಸಭೆಗೆ ಶ್ರೀ ಮಟ್ಟಿಯವರು ಅಧ್ಯಕ್ಷರಾಗಿಯೂ ಶ್ರೀ ಭಾಲಚಂದ್ರ ಘಾಣೇಕರರು ಉಪಾಧ್ಯಕ್ಷರಾಗಿಯೂ ಬಹುಮತದಿಂದ ಆರಿಸಲ್ಪಟ್ಟರು.

ಗದುಗಿನ ಮೆಸರ್ಸ ಭೂಮರಡ್ಡಿಯವರ ಟ್ರಕ್ಕು ೨೩ಕ್ಕೆ ಹುಬ್ಬಳ್ಳಿಗೆ ಹೊರಟಾಗ ಬಿಂಕದಕಟ್ಟಿ ಬಳಿಯಲ್ಲಿ ಹಾದಿಯಲ್ಲಿ ಒಬ್ಬ ಹುಡುಗನು ಅಡ್ಡ ಬಂದನು. ಆ ಹುಡುಗನನ್ನು ಉಳಿಸುವದಕ್ಕಾಗಿ ಕೂಡಲೆ ಗಾಡಿಯನ್ನು ನಿಲ್ಲಿಸಲಾಯಿತು. ಧಡಕಿಗೆ ಕ್ಲೀನರನು ಟ್ರಕ್ಕಿನೊಳಗಿಂದ ಬಿದ್ದು ತಕ್ಷಣ ಮರಣಹೊಂದಿದನು.

ಕರ್ನಾಟಕ ಏಕೀಕರಣ ಕಾರ್ಯಕ್ಕಾಗಿ ಒಂದು ಲಕ್ಷ ರೂಪಾಯಿ ನಿಧಿ ಕೂಡಿಸಬೇಕೆಂದು ಗೊತ್ತಾಗಿದ್ದು ಅದಕ್ಕಾಗಿ ಒಂದು ಸಮಿತಿಯನ್ನು ನೇಮಿಸಲಾಗಿದೆ. ಈ ನಿಧಿಗೆ ಕರ್ನಾಟಕಸ್ಥರೆಲ್ಲ ಹಣ ಕೊಟ್ಟು ಕನ್ನಡಿಗರ ಬಹು ದಿನದ ಧ್ಯೇಯವಾದ ಸ್ವತಂತ್ರ ಪ್ರಾಂತವನ್ನು ಸಾಧಿಸಿಕೊಳ್ಳಬೇಕೆಂದು ಏಕೀಕರಣ ಸಮಿತಿಯವರು ಬಿನ್ನವಿಸಿದ್ದಾರೆ.

ಹುಬ್ಬಳ್ಳಿಯಲ್ಲಿ ೨೨ ನೇ ತಾರೀಕು ಮುಂಜಾವೆ ನಾಗಶೆಟ್ಟಿಕೊಪ್ಪದ ಬಾವಿಯಲ್ಲಿ ೨೫ ವರ್ಷದ ತರುಣಿಯ ಹೆಣವೊಂದು ದೊರೆತಿದ್ದು ಹೀನ ಕೊಲೆಯೊಂದು ಬೆಳಕಿಗೆ ಬಂದಿದೆ. ಈ ತರುಣಿಯ ನಡಕ್ಕೆ ಒಂದು ದೊಡ್ಡ ಕಲ್ಲು ಕಟ್ಟಿ ಅವಳನ್ನು ಬಾವಿಯಲ್ಲಿ ಒಗೆದಿರಬೇಕು. ಅವಳ ಕುತ್ತಿಗೆಯನ್ನು ಕೊಯ್ದದ್ದು ಕಂಡುಬರುತ್ತಿದೆ.

ಅಗಸ್ಟ ೧೫ಕ್ಕೆ ಪ್ರಜಾ ಸ್ವಾತಂತ್ರ್ಯ ದಿನವನ್ನು ಆಚರಿಸಿ ಬಂಧನಕ್ಕೊಳಗಾದ ಹುದಲಿ ಆಶ್ರಮದ ಶ್ರೀ ಬಿ. ಆರ್. ದೇಸಾಯಿ ಇವರು ಆಮರಣ ಉಪವಾಸವನ್ನು ಪ್ರಾರಂಭಿಸಿದ್ದಾರೆ. ಅವರ ಪ್ರಕೃತಿಯು ಕೆಡಹುತ್ತಿದ್ದು ರಾಯಚೂರ ಜಿಲ್ಲೆಯ ಪ್ರಜೆಗಳೆಲ್ಲರೂ ಚಿಂತಾಗ್ರಸ್ತರಾಗಿರುವರು.

ಹುಬ್ಬಳ್ಳಿಯಲ್ಲಿ ಮಾಧ್ವ ಮಂಡಳದ ಪರವಾಗಿ ಶ್ರೀ ಮಧ್ವನವಮಿ ಮಹೋತ್ಸವ ರಾ. ಬ. ಪಾಳವೇಕರರ ಅಧ್ಯಕ್ಷತೆಯಲ್ಲಿ ಆಚರಿಸಲ್ಪಟ್ಟು ಶ್ರೀ ಕಟ್ಟಿ, ಸತ್ಯವೀರಾಚಾರ್ಯ ಕೋರ್ಲಹಳ್ಳಿ ವೆಂಕಟರಾವ ನಾಯಕ ಮತ್ತು ರಾಮಾಚಾರ್ಯ ಶಿಸ್ತೂರ ಇವರ ಭಾಷಣಗಳಾದ ನಂತರ ಪಾರಿತೋಷಕ ವಿತರಣವಾಗಿ ಸಭೆ ಕೊನೆಗಂಡಿತು.

ಹುಬ್ಬಳ್ಳಿಯಲ್ಲಿ ಮಹಾತ್ಮರ ನಿಧನದ ೧೩ ನೇ ದಿನವನ್ನು ಆಚರಿಸಲಾಯಿತು. ಬಾಪೂಜಿಯವರ ಭಾವಚಿತ್ರದ ಮೆರವಣಿಗೆ ಹೊರಡಿಸಲಾಗಿತ್ತು. ರಾತ್ರಿ ಭಜನೆ ಕೀರ್ತನೆ ಮುಂತಾದ್ದು ನಡೆದು ಮರುದಿನ ಎಂದಿನಂತೆ ರಾಷ್ಟ್ರಧ್ವಜವನ್ನು ಮೇಲಕ್ಕೇರಿಸಲಾಯಿತು.

ಹಾವರಗೇರಿಯ ಯಾವತ್ತೂ ಹಿಂದು ಮುಸಲ್ಮಾನ ಜನರು ಗಾಂಧೀಜಿ ನಿಧನದ ನಿಮಿತ್ತ ೧೨ ನೇ ತಾರೀಕಿಗೆ ಸೂತಕ ದಿನಾಚರಣೆ ಮಾಡಿದರು. ಶ್ರೀ ಚನಬಸಪ್ಪ ದೊಡ್ಡಚನ್ನಪ್ಪ ಗಡಿಯಪ್ಪನವರ ಇವರು ಅಧ್ಯಕ್ಷತೆ ವಹಿಸಿದ್ದರು.

ಮೂಗೂರಿನಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳ ಅದ್ಭುತ ಲೀಲೆಗಳ ಬಗ್ಗೆ ಮಂತ್ರಾಲಯ ಯಾತ್ರಿಕರ ಸಂಘದ ಅಧ್ಯಕ್ಷರು ಸ್ವತಃ ಕಂಡು ಅನುಭವಿಸಿದ ವಿಷಯವನ್ನು ನಾಲ್ಕು ಪುಟಗಳಲ್ಲಿ ಮುದ್ರಿಸಿದ್ದು ಅದನ್ನು ತರಿಸಿಕೊಳ್ಳಬಯಸುವ ಸಂಘದ ಸದಸ್ಯರು ಒಂದಾಣೆಯ ಅಂಚೆ ತಿಕೀಟುಗಳನ್ನು ತಮ್ಮ ಕಡೆಗೆ ಕಳಿಸಿಕೊಡಬೇಕೆಂದು ಸಂಘದ ಅಧ್ಯಕ್ಷರಾದ ಶ್ರೀ ಗೋಪಾಳರಾವ ನವಲಿ ವಕೀಲ ಗದಗ ಇವರು ಬಿನ್ನವಿಸುತ್ತಾರೆ.

ಅಕ್ಕಿಯ ನಿರ್ಯಾತ ಬಹಳವಾಗಹತ್ತಿದ್ದರಿಂದ ದರಗಳು ತೀರ ಮೀರಿ ಏರಹತ್ತಿವೆ. ಜೋಳದ ದರಗಳೂ ಏರಿವೆ. ಇದರಿಂದ ಜನರು ಗಾಬರಿಗೊಂಡಿದ್ದಾರೆ.

## ವಿಜಾಪುರ

ಬಾಗಲಕೋಟೆಯಿಂದ ಜೋಳ ಬಹಳ ಪ್ರಮಾಣದಲ್ಲಿ ಹೊರಗೆ ಹೋಗಹತ್ತಿದ್ದರಿಂದ ಕೂಡಲೆ ಅದನ್ನು ತಡೆಯಬೇಕೆಂದೂ ಇಲ್ಲದಿದ್ದರೆ ಪರಿಸ್ಥಿತಿ ಘೋರವಾಗಬಹುದೆಂದೂ ನಾಗರಿಕರು ಅಭಿಪ್ರಾಯ ಪಡುತ್ತಾರೆ.

ಮುಚಖಂಡಿ ಕೆರೆಯ ನೀರನ್ನು ೫ ಮೈಲುಗಳ ಮೇಲೆ ಕೆಲವು ಕಾಯಿಪಲ್ಲೆ ತೋಟಗಳಿಗೆ ಬಿಟ್ಟು ಹಾಳು ಮಾಡುತಿರುವದನ್ನು ಮುಚಖಂಡಿಯ ರೈತರು ವಿರೋಧಿಸುತಿರುವರು. ಹೀಗೆ ನೀರು ಹೋದದ್ದಾದರೆ ಇಲ್ಲಿನ ದನ ಕರುಗಳಿಗೂ ನೀರಿನ ಅರಬು ಉಂಟಾಗುವ ಅಂಜಿಕೆಯಿದೆಯೆಂದೂ ರೈತರು ಸರಕಾರಕ್ಕೆ ತಿಳಿಸಿರುವರು.

ವಿಜಾಪುರ ವಿಜಯ ಕಾಲೇಜಿನ ಎಫ್ ವಾಯ ವರ್ಗದಲ್ಲಿಯ ವಿದ್ಯಾರ್ಥಿ ಶ್ರೀ ವೆಂಕಟೇಶ ರಾಮಚಂದ್ರ ಅಥಣೀಕರ ಇವರು ಗಾಂಧೀಜಿಯವರ ಕೊಲೆಯ ಸುದ್ದಿಯನ್ನು ಕೇಳಿ ಶುಕ್ರವಾರ ರಾತ್ರಿ ಚಿಮಣಿಯನ್ನು ಸುರುವಿಕೊಂಡು ಬೆಂಕಿ ಹಚ್ಚಿಕೊಂಡು ಸತ್ತನು.

ಸೋಮಂಜ್ಯಾಳದಲ್ಲಿ ಶ್ರೀ ಮಲ್ಲಿಕಾರ್ಜುನಗೌಡಾ ಪಾಟೀಲ ಇವರ ಅಧ್ಯಕ್ಷತೆಯಲ್ಲಿ ಗಂಡು ಮಕ್ಕಳ ಶಾಲೆಯಲ್ಲಿ ಸಭೆ ಸೇರಿ ಮುಖ್ಯಾಧ್ಯಾಪಕ ಮಲಘಾಣ, ದೇಶಪಾಂಡೆ ಹಾಗು ಹಸನಸಾಹೇಬ ಇವರು ಗಾಂಧೀಜಿ ಬಗ್ಗೆ ಭಾಷಣಮಾಡಿ ಅವರ ನಿಧನದಿಂದಾದ ದುಃಖವನ್ನು ವ್ಯಕ್ತಪಡಿಸಿದರು.

ಗುಳೇದಗುಡ್ಡದಲ್ಲಿ ಮೊದಲು ರೂಪಾಯಿಗೆ ೫ ಸೇರು ಇದ್ದ ಜೋಳದ ಧಾರಣೆ ಧಾನ್ಯ ನಿಯಂತ್ರಣ ತೆಗೆದಂದಿನಿಂದ ರೂಪಾಯಿಗೆ ಮೂರು ಸೇರಾಗಿವೆ. ಇಲ್ಲಿಂದ ದಿನವೂ ಜೋಳ ಹೊರಗೆ ಹೋಗಹತ್ತಿರುವದು. ಧಾರಣೆ ಈ ರೀತಿ ಏರಿದ್ದರಿಂದ ಜನರು ಚಿಂತಾಗ್ರಸ್ತರಾಗಿರುವರು.

## ಬಳ್ಳಾರಿ

ಅದವಾನಿ ಮುನಿಸಿಪಾಲ್ಟಿಯ ಅಧ್ಯಕ್ಷರಾದ ಶ್ರೀ ರಾಮಚೋಟಿ ಸುಬ್ಬಯ್ಯನವರು ಬಳ್ಳಾರಿ ಜಿಲ್ಲಾ ನಗರ ಸಭೆಯ ಸದಸ್ಯರ ಮತದಾರ ಸಂಘದಿಂದ ೪೪ ಮತಗಳನ್ನು ಪಡೆದು ಮದ್ರಾಸ ವಿಶ್ವವಿದ್ಯಾಲಯದ ಸಿನೇಟಿಗೆ ಆರಿಸಿ ಬಂದಿದ್ದಾರೆ— ವಿರೋಧಿಗಳಾದ ಎಸ್ ರಹಿಮಾನರಿಗೆ ೩ ಮತಗಳು ಅದವಾನಿಯ ಸತ್ಯನಾರಾಯಣರಿಗೆ ಶೂನ್ಯ ಮತಗಳು ಬಿದ್ದವು.

ಸಾರ್ವಜನಿಕರ ಹಿತಕ್ಕಾಗಿ ಬಳ್ಳಾರಿ ವಿದ್ಯುತ್ ಪೂರೈಕೆ ಕಂಪನಿಯ ಲಾಯಸೆನ್ಸನ್ನು ಮದ್ರಾಸ ಸರಕಾರಕ್ಕೆ ಒಪ್ಪಿಸಬೇಕೆಂದು ಮುಖ್ಯ ಎಂಜಿನಿಯರರು ಕೇಳಿಕೊಂಡದ್ದರ ಬಗ್ಗೆ ವಿಚಾರಮಾಡಿ ವರದಿ ಒಪ್ಪಿಸಲು ಬಳ್ಳಾರಿ ನಗರ ಸಭೆಯು ಆಯಿದು ಜನರ ಒಂದು ಸಮಿತಿಯನ್ನು ನಿಯಮಿಸಿದೆ.

ಲಕ್ಷ್ಮೇಶ್ವರದ ಟಾಕಪ್ಪ ಎಂಬವನನ್ನು ಹೊಸಪೇಟೆಯ ಪೋಲೀಸ ಅಧಿಕಾರಿಗಳು ಸಂಶಯದಿಂದ ಬಂಧಿಸಿ ವಿಚಾರಿಸಲಾಗಿ ಅವನ ಹತ್ತಿರ ೨೫೦ ರೂಪಾಯಿಗಳು ಇರದ ಬಟ್ಟೆ ದೊರೆಯಿತು.

## ದಕ್ಷಿಣ ಕನ್ನಡ

ಮಂಗಳವಾಡಿಯಲ್ಲಿ ಗಾಂಧೀಜಿಯ ಅವಶೇಷಗಳನ್ನು ವಿಸರ್ಜಿಸುವ ಕಾರ್ಯ ಯಥಾವಿಧಿ ನಡೆಯಿತು. ಗ್ರಾಮ ನಿವಾಸಿಗಳೆಲ್ಲ ನೆರೆದಿದ್ದರು. ಶ್ರೀ ದುರ್ಗಾ ಪರಮೇಶ್ವರಿ ಅಮ್ಮನವರ ಸನ್ನಿಧಿಯಲ್ಲಿ ಶ್ರೀ ಪಟೇಲ್ ಯಂ ಕೆಂಪಣ್ಣ ಶೆಟ್ಟರ ಮುಂದಾಳ್ತನದಲ್ಲಿ ಸಭೆ ಸೇರಿದ್ದಿತು. ಗೀತಾಪಠನ ಗಾಂಧೀಜಿ ಜೀವನ ಚರಿತ್ರೆಯ ಕಥನ ಕೆ. ಸೆಣ್ಣಯ್ಯ ವಿದ್ವಾನ್ ಇವರಿಂದ ವಿರಚಿತವಾದ ಮಹಾತ್ಮಾಜಿ ಎಂಬ ಕವಿತೆಯ ವಾಚನ ಭಾಷಣ ಮೊದಲಾದವುಗಳು ನಡೆದವು. ಗಾಂಧೀ ಮಂದಿರದ ಶಂಕು ಸ್ಥಾಪನೆಯು ಆಯಿತು. ಭಾಷಣಗಳೂ ಜರುಗಿದವು. ಇದಕ್ಕೂ ಮೊದಲು ಮೆರವಣಿಗೆಯನ್ನು ಹೊರಡಿಸಲಾಗಿತ್ತು.

ಉಡುಪಿ ತಾಲೂಕ ಆಹಾರ ಸಮ್ಮೇಳನ ೧೫ಕ್ಕೆ ಎಸ್. ಎನ್. ಹೊಳ್ಳರ ಅಧ್ಯಕ್ಷತೆಯಲ್ಲಿ ಸೇರಿ ನಿಯಂತ್ರಣಗಳನ್ನು ಇಡಬೇಕು ಎಂಬ ಬಗ್ಗೆ ಕೆಲವರು ಭಾಷಣ ಮಾಡಿದ ನಂತರ ಕೆಂಪು ದಳದ ಮೇಲಿನ ನಿರ್ಬಂಧ ಹಿಂತೆಗೆದುಕೊಳ್ಳಬೇಕು, ಹಿಂದೂ ಮಹಾಸಭೆಯ ಮೇಲೆ ನಿರ್ಬಂಧ ಹೇರಬೇಕು ಮೊದಲಾದ ಗೊತ್ತುವಳಿ ಸ್ವೀಕೃತವಾದವು.

## ಉತ್ತರ ಕನ್ನಡ

ಕುಮಟೆಯ ಹಿಂದೂ ಮಹಾಸಭೆಯವರು ಸಭೆಸೇರಿ ಮಹಾತ್ಮರ ನಿಧನದ ಬಗ್ಗೆ ದುಃಖ ಪ್ರದರ್ಶಿಸಿದರು.

ಕಾರವಾರ ಗೋಡಾವುನ ಕೀಪರ ಶ್ರೀ ಎಂ. ಡಿ. ಹಬ್ಬೂ ಇವರ ಮೇಲಿನ ೧೯೪೨ ರಿಂದ ೧೯೪೪ ರ ವರೆಗಿನ ಲೆಕ್ಕಪತ್ರ ಮತ್ತು ಸರಕಾರೀ ಹಣದ ಅಪರಾತಫರಿಯ ಖಟ್ಲೆಯ ವಿಚಾರಣೆ ಸೆಶನ್ಸ ಕೋರ್ಟಿನಲ್ಲಿ ನಡೆದು ಮೂರು ವರ್ಷ ಸಶ್ರಮ ಶಿಕ್ಷೆ ಅವರಿಗೆ ವಿಧಿಸಲಾಯಿತು. ಈ ನಿರ್ಣಯದ ವಿರುದ್ಧ ಅಪೀಲ ಮಾಡಲಾಗುವದು.

## ಕನ್ನಡ ಸಂಸ್ಥಾನ

ಜೋಗದ ವಿದ್ಯುದಾಗರಕ್ಕೆ ಮಹಾತ್ಮರ ಹೆಸರಿಡುವ ಸಮಾರಂಭ ಮೈಸೂರಿನ ಶ್ರೀ ಮನ್ಮಹಾರಾಜರ ಹಸ್ತದಿಂದ ಜರುಗಿತು. ೨೫೦೦೦ ಕಿಲೋವ್ಯಾಟ್ ವಿದ್ಯುತ್ ಶಕ್ತಿಯನ್ನು ಉತ್ಪಾದಿಸುವ ಎರಡು ಜನರೇಟರುಗಳು ಪ್ರಾರಂಭಿಸಲ್ಪಟ್ಟವು.

ಚಿಕ್ಕಮಗಳೂರಿನ ಬಾಬಾ ಬುಡನಗಿರಿ ಉರಸು ಬರುವ ಮಾರ್ಚ ತಿಂಗಳ ೨೬ಕ್ಕೆ ಪ್ರಾರಂಭವಾಗಲಿದೆ.

ಕೊಲ್ಹಾಪುರ ಸಂಸ್ಥಾನದಲ್ಲಿ ಒಂದು ಮೂರಾಂಶದಷ್ಟು ಕನ್ನಡಿಗರಿದ್ದು ಮರಾಠಿಯ ಜೊತೆಗೆ ಕನ್ನಡವನ್ನೂ ರಾಜಭಾಷೆಯನ್ನಾಗಿ ಮಾಡಬೇಕೆಂದು ಮಹಾಸಮಿತಿಯವರು ಬರೆದಿದ್ದಕ್ಕೆ ಕನ್ನಡಿಗರ ಸಂಖ್ಯೆ ಒಂದುಹತ್ತಾಂಶ ಮಾತ್ರ ಇದೆಯೆಂದೂ ಸಂಸ್ಥಾನ ಸರಕಾರದಿಂದ ಬರೆದು ಬಂದಿದೆ. ಆದರೆ ಅಲ್ಲಿಯ ಜನರಲ್ಲಿ ಅನೇಕರನ್ನು ಮರಾಠಿಗರೆಂದು ತಪ್ಪಾಗಿ ಭಾವಿಸಲಾಗಿದೆಂದು ಇತ್ತೀಚೆಗೆ ಗೊತ್ತಾಗಿದೆ ಅದೇನೇ ಇದ್ದರೂ ಇದ್ದಷ್ಟು ಕನ್ನಡಿಗರ ಹಕ್ಕನ್ನಾದರೂ ರಕ್ಷಿಸುವದು ಕರ್ತವ್ಯವೆಂದು ಮಹಾಸಮಿತಿಯು ಪ್ರಕಟಿಸುತ್ತದೆ.

ದಾವಣಗೇರೆ ತಾಲೂಕು ಕನಗೊಂಡನಹಳ್ಳಿಯಲ್ಲಿ ಊರಿನ ಜನರೆಲ್ಲ ೧೨ ನೇ ತಾರೀಕು ಸಭೆ ಸೇರಿ ೨ ನಿಮಿಷ ಮೌನದಿಂದ ಎದ್ದು ಗಾಂಧೀಜಿ ನಿಧನದ ಬಗ್ಗೆ ದುಃಖ ಪ್ರದರ್ಶಿಸಿದರು. ಪರಸ್ಥಳದವರಿಗೂ ಬಡಬಗ್ಗರಿಗೂ ಹರಿಜನರಿಗೂ ಊಟದ ವ್ಯವಸ್ಥೆ ಮಾಡಲಾಗಿತ್ತು. ಈ ಕಾರ್ಯದಲ್ಲಿ ನಗರದಲ್ಲೆಲ್ಲ ಸಂಪೂರ್ಣ ಐಕಮತ್ಯವಿದ್ದಿತು.

ಮಂಗಾಪುರದ ಎ. ವಿ. ನಾರಾಯಣ ಅಯ್ಯರವರ ಅಧ್ಯಕ್ಷತೆಯಲ್ಲಿ ಸೊರಬ ತಾಲೂಕಿನ ಜಡೆ ಹೋಬಳಿಯ ಜಡೆ ಗ್ರಾಮದ ಗಾಂಧೀ ಮೈದಾನದಲ್ಲಿ ಸಭೆ ಸೇರಿ ಮಹಾತ್ಮರ ನಿಧನದ ಬಗ್ಗೆ ದುಃಖ ಪ್ರದರ್ಶಿಸಿ ಅವರ ಆತ್ಮಕ್ಕೆ ಶಾಂತಿಯನ್ನು ಕೋರಲಾಯಿತು. ಗಾಂಧೀಯುಗವನ್ನು ಪ್ರಾರಂಭಿಸಬೇಕೆಂದು ಸರಕಾರಕ್ಕೆ ಬಿನ್ನವಿಸಿಕೊಳ್ಳಲಾಯಿತು.

ರಾಮದುರ್ಗ ಪ್ರಜಾಸಂಘದ ಕಾರ್ಯದರ್ಶಿ ಶ್ರೀ ಬಸವಣ್ಣೆಪ್ಪ ಪಟ್ಟಣ ಇವರು ವಯಸ್ಸಿನ ೬೦ ನೇ ವರ್ಷದಲ್ಲಿ ದಮ್ಮಿನ ವಿಕಾರದಿಂದ ನಿಧನ ಹೊಂದಿದರೆಂದು ತಿಳಿಸಲು ವಿಷಾದಿಸುತ್ತೇವೆ. ರಾಮದುರ್ಗ ದುರಂತದ ಕಾಲಕ್ಕೆ ಇವರ ಆಸ್ತಿಯು ಜಪ್ತ ಮಾಡಲಾಗಿತ್ತು.

ಕೊಲ್ಹಾಪುರ ಪ್ರಜಾ ಪರಿಷತ್ತಿನ ವಿಶೇಷ ಸಾಮಾನ್ಯ ಸಭೆ ಮಾರ್ಚ ೭ಕ್ಕೆ ಪನ್ಹಾಳದಲ್ಲಿ ಕರೆಯಲ್ಪಟ್ಟಿದೆ. ಪ್ರಜಾ ಪರಿಷತ್ತಿನ ಕಾರ್ಯಕಾರಿ ಸಮಿತಿಯವರು ಸಭೆ ಸೇರಿ ಸ್ವತಂತ್ರ ಸ್ವಯಂಪೂರ್ಣ ಕೊಲ್ಹಾಪುರ ಬೇಕೆಂದೂ ಕೊಲ್ಹಾಪುರ ಸಂಸ್ಥಾನವು ಹಿಂದೀ ಒಕ್ಕೂಟದಲ್ಲಿ ಲೀನವಾಗಬಾರದೆಂದೂ ನಿರ್ಣಯಿಸಿದರು.

ಹೈದ್ರಾಬಾದ ಸಂಸ್ಥಾನದಲ್ಲಿ ನಡೆಯುತಿರುವ ಘಟನೆಗಳ ಬಗೆಗೆ ಕ್ರಿಯಾ ಸಮಿತಿಯು ಅತ್ಯಂತ ಚಿಂತೆಯನ್ನೂ ವಿಷಾದವನ್ನೂ ವ್ಯಕ್ತಪಡಿಸಿ ಹೈದ್ರಾಬಾದ ಪ್ರಜೆಗಳು ಹೊಣೆಗಾರ ಸರಕಾರಕ್ಕಾಗಿ ಹಾಗೂ ಭಾರತದ ಸಂಘ ರಾಜ್ಯದಲ್ಲಿ ಕೂಡಿಕೊಳ್ಳುವದಕ್ಕಾಗಿ ಮುಂದಿಟ್ಟ ನ್ಯಾಯ್ಯ ಬೇಡಿಕೆಗಳನ್ನು ಕುರಿತು ನಿಜಾಮ ಸರಕಾರವು ಪ್ರತಿಗಾಮಿ ಮತ್ತು ಪ್ರಜಾಪ್ರಭುತ್ವ ವಿರೋಧಿ ಧೋರಣವಹಿಸಿದ್ದೇ ಕಾರಣವಾಗಿದೆ. ಅಲ್ಲಿನ ಇತ್ತೇಹಾದ ಉಲ್ ಮುಸಲ್ಮೀನರವರು ನಡೆಸಿದ ಸಮಾಜಕಂಟಕ ಹಿಂಸಾಚಾರಗಳನ್ನು ಪ್ರತಿಭಟಿಸುತಿರುವ ಅಲ್ಲಿನ ಶೂರ ಜನರನ್ನು ಅಭಿನಂದಿಸುತ್ತದೆ. ಈ ಬಗೆಯ ಪ್ರತಿಕೂಲ ಧೋರಣೆಯ ಮೂಲಕ ಸಂಸ್ಥಾನವನ್ನೇ ಕರಗಿಸಬೇಕೆಂದು ನಿಜಾಮ ಸರಕಾರವನ್ನು ಬಿನ್ನವಿಸುವ ಗೊತ್ತುವಳಿಯನ್ನು ಕ್ರಿಯಾ ಸಮಿತಿಯು ಸ್ವೀಕರಿಸಿದೆ.

ಬೆಳಗಲಿಯಲ್ಲಿ ಮಹಾತ್ಮರ ಸೂತಕದಿನವನ್ನು ವಿಧಿಪೂರ್ವಕ ಆಚರಿಸಲಾಯಿತು. ಹೊಸೂರ ಅಲ್ಲಪ್ಪನವರ ನೇತೃತ್ವದಲ್ಲಿ ಭಜನಾಸಮ್ಮೇಲನವನ್ನು ಸೇವಾದಲ ವಿದ್ಯಾರ್ಥಿಗಳು ಕೂಡಿ ಭಾವಚಿತ್ರದ ಮೆರವಣಿಗೆ ಹೊರಡಿಸಿದ್ದರು. ಹಳ್ಳೂರ ಬಸಪ್ಪನವರ ಅಧ್ಯಕ್ಷತೆಯಲ್ಲಿ ಸಭೆಸೇರಿ ಭಾಷಣಗಳಾದವು.

ಮಿರಜಿಯಲ್ಲಿ ಖಾಕ್ಸಾರ ಸಂಸ್ಥೆ ಮು. ಲೀ. ರಾ. ರಕ್ಷಕ ದಳ, ಮು. ರಾ. ರಕ್ಷಕ ದಳ ಇವುಗಳನ್ನು ಅಕ್ರಮವೆಂದು ಸಾರಲಾಗಿದೆ.

ಗಡಕೂರು ಶ್ರೀ ಜ. ನಿಡುಮಾಮಿಡಿ ಸಂಸ್ಥಾನದ ದೇವಾಲಯಗಳಿಗೆ ಹರಿಜನ ಪ್ರವೇಶ ಸಮಾರಂಭವು ೧೮ ನೇ ತಾರೀಕು ಮುಖ್ಯಮಂತ್ರಿ ಶ್ರೀ ಕೆ. ಚೆಂಗಲರಾಯರೆಡ್ಡಿಯವರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು.

ಹಿರೇಬಿದನೂರು ಗ್ರಾಮದ ಶ್ರೀರಾಮಲಿಂಗೇಶ್ವರ ದೇವಸ್ಥಾನದ ಬಳಿ ಶ್ರೀ ಜಗದ್ಗುರು ಪಂಡಿತಾರಾಧ್ಯ ಶ್ರೀಮನ್ನಿರುಪಾಧಿ ಶ್ರೀಶೈಲ ಚೆನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳ ವಿದ್ಯಾರ್ಥಿ ನಿಲಯದ ಪ್ರಾರಂಭೋತ್ಸವ ೨೨ಕ್ಕೆ ಎಸ್. ಸಿ. ನಾಗರಾಮರೆಡ್ಡಿಯವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಓ. ಲಿಂಗಣ್ಣಯ್ಯ ಇವರು ಭಾಷಣ ಮಾಡಿದರು.

ಅನೇಕಲ್ ತಾಲೂಕು ನಾರಾಯಣಘಟ್ಟ ಕ್ಷೇತ್ರದಲ್ಲಿ ಮಾಘ ಶುದ್ಧ ತ್ರಯೋದಶಿಯಿಂದ ವದ್ಯ ತೃತೀಯಾದ ವರೆಗೆ ಶ್ರೀ ಪ್ರಸನ್ನ ನಂಜುಂಡೇಶ್ವರ ಸ್ವಾಮಿಯ ಬ್ರಹ್ಮೋತ್ಸವವು ಭಕ್ತರ ಸಹಾಯ ಸಹಕಾರಗಳಿಂದ ಅತ್ಯಂತ ವಿಜೃಂಭಣೆಯಿಂದ ಸಾಂಗವಾಯಿತು—ವರೂರು ಹೋಬಳಿ ಕೊಡತಿ ಶಾನುಭೋಗ ಬಿ. ಲಕ್ಷ್ಮೀನಾರಾಯಣಯ್ಯನವರು ತಮ್ಮ ವಿವಾಹ ಮಹೋತ್ಸವದ ನಿಮಿತ್ತ ಈ ಬ್ರಹ್ಮೋತ್ಸವವನ್ನು ಜರುಗಿಸಿದರು.

# ಹಿಂದೂಸ್ಥಾನ

## ಮುಂಬಯಿ

ಮುಂಬಯಿಯಿಂದ ೧೪ ಮೈಲು ಅಂತರದ ಮೇಲೆ ವಿಖ್ರೋಲಿ ಉಪನಗರದಲ್ಲಿರುವ ಸಿಪ್ಲಾ ಕಾರಖಾನೆಯಲ್ಲಿ ಬೆಂಕಿ ಹತ್ತಿ ೧ ಲಕ್ಷ ರೂ. ಗಳ ಹಾನಿ ಸಂಭವಿಸಿದೆ. ಅಗ್ನಿಶಾಮಕ ದಲದವರು ಬೆಂಕಿಯನ್ನು ನಂದಿಸಿದರು. ಒಬ್ಬನಿಗೆ ತೀವ್ರ ಗಾಯಗಳಾಗಿವೆ.

ಮುಂಬಯಿ, ಅಹಮ್ಮದಾಬಾದ ಸೊಲ್ಲಾಪುರ ನಗರಗಳಲ್ಲಿ ಆಹಾರ ಸೀಮಾ ರದ್ದುಗೊಳಿಸಲು ಸರಕಾರವು ವಿಚಾರ ನಡೆಸಿರುವದೆಂದು ಕೆಲ ಪತ್ರಿಕೆಗಳಲ್ಲಿ ಪ್ರಸಿದ್ಧವಾದ ಸುದ್ದಿ ಸುಳ್ಳಿರುವದೆಂದು ಸರಕಾರದ ಪ್ರಕಟನೆ ಹೊರಟಿದೆ.

ಗೃಹಮಂತ್ರಿಗಳಾದ ಮಾನ್ಯ ಶ್ರೀ ಮೊರಾರಜಿಯವರು ತಾ. ೨೪ ಕ್ಕೆ ಉಪಮಂತ್ರಿ ಶ್ರೀ ಚವ್ಹಾಣರೊಡನೆ ಬೆಳಗಾವ ಹಾಗು ಸಾತಾರೆ ಜಿಲ್ಲೆಗಳ ಪರಿಸ್ಥಿತಿ ಅಭ್ಯಸಿಸಲು ೫ ದಿನದ ಪ್ರವಾಸಕ್ಕೆ ಹೊರಟಿರು.

ಮುಂಬಯಿ ಔದ್ಯೋಗಿಕ ನ್ಯಾಯಮಂಡಲದ ಅಧ್ಯಕ್ಷರಾದ ಸರ ಎಚ್. ವ್ಹಿ. ದಿವೇಟಿಯಾ ಇವರನ್ನು ಸೌರಾಷ್ಟ್ರ ಹಾಯಕೋರ್ಟಿನ ಮುಖ್ಯ ನ್ಯಾಯಾಧೀಶರೆಂದು ನೇಮಿಸಲಾಗಿದೆ. ಅವರು ಈ ಹೊಸ ಹುದ್ದೆಯಲ್ಲಿದ್ದರೂ ಇನ್ನು ಕೆಲ ದಿನಗಳ ಮಟ್ಟಿಗೆ ಮುಂಬಯಿ ಔದ್ಯೋಗಿಕ ನ್ಯಾಯಮಂಡಲದ ಅಧ್ಯಕ್ಷರಾಗಿಯೂ ಕೆಲಸಮಾಡುವರೆಂದು ತಿಳಿಯುತ್ತದೆ.

ಗಾಂಧೀಜಿಯವರ ಮೇಲೆ ಬಾಂಬನ್ನು ಒಗೆದ ಮದನಲಾಲನನ್ನು ಬಂಧಿಸಿದಕೂಡಲೆ ದಿಲ್ಲಿಯ ಪೋಲೀಸರು ಗೋಡಸೇನೂ ಮದನಲಾಲನಿಗೆ ಸಹಾಯ ನೀಡುತ್ತಿರುವನೆಂದು ಕಂಡುಹಿಡಿದು ಹೆಚ್ಚಿನ ವಿವರಗಳಿಗಾಗಿ ಮುಂಬಯಿ ಪೋಲೀಸರೊಂದಿಗೆ ಸಂಪರ್ಕ ಬೆಳೆಸಿದರೆಂದೂ ಆದರೆ ಮುಂಬಯಿ ಪೋಲೀಸರು ಅದಕ್ಕೆ ವಿಶೇಷ ಮಹತ್ವ ಕೊಡಲಿಲ್ಲನೆಂದೂ ಕೆಲವು ಪತ್ರಿಕೆಗಳು ಪ್ರಸಿದ್ಧಿಸಿದ್ದು ಸಂಪೂರ್ಣ ಸುಳ್ಳಿರುವದೆಂದು ಮುಂಬಯಿ ಸರಕಾರದವರು ಪ್ರಕಟನೆ ಹೊರಡಿಸಿದ್ದಾರೆ.

ಸೊಲ್ಲಾಪುರದ ಆರ್. ಎಸ್. ಎಸ್. ಸಂಘದ ಕಾರ್ಯಕರ್ತರಾದ ಶ್ರೀ ಎಸ್. ಬಿ. ಜೋಶಿ ಅವರ ಮನೆ ಶೋಧಿಸಿ ಮುಂಬಯಿ ಸಂರಕ್ಷಣಾ ಕಾನೂನಿನನ್ವಯ ಪೋಲೀಸರು ಅವರನ್ನು ಬಂಧಿಸಿರುವರು.

ಪಂಢರಪುರದಲ್ಲಿ ಹಿಂದು ಮಹಾಸಭೆಯ ಮುಖಂಡರಾದ ಬಾಪೂಸಾಹೇಬ ಕಾಳೆ ಎಂಬ ವಕೀಲರನ್ನು ಬಂಧಿಸಿ ಸೊಲ್ಲಾಪುರ ಜೇಲಿಗೆ ಕರಲಾಗಿದೆ.

ಅಹಮ್ಮದಾಬಾದದ ರೋಜಗಾರ ಎಂಬ ಉರ್ದು ದೈನಿಕ ಪತ್ರದ ಸಂಪಾದಕರಾದ ಶ್ರೀ ಮೊಯಿನುದ್ದೀನ ಎ. ಖುರೇಶಿ ಅವರು ಕರಾಚಿಯಿಂದ ಬಂದ ವಿಮಾನದಿಂದ ಇಳಿಯುತ್ತಲೇ ಮುಂಬಯಿ ಸಂರಕ್ಷಣ ಕಾನೂನಿನನ್ವಯ ಪೋಲೀಸರು ಬಂಧಿಸಿದರು.

ಬಂಗಾರದ ಸಟ್ಟಾ ವ್ಯಾಪಾರ ನಿಯಂತ್ರಿಸುವದು ಅವಶ್ಯವಿದೆಯೆಂದೂ ಸಟ್ಟಾ ನಿಯಂತ್ರಣ ಕಾಯದೆಯನ್ನು ಬಂಗಾರದ ಪೇಟೆಗೆ ಅನ್ವಯಿಸಬೇಕೆಂದೂ ಮುಂಬಯಿ ಮಂತ್ರಿ ಮಂಡಲದ ಉಪಸಮಿತಿಯವರು ಸೂಚಿಸಿರುತ್ತಾರೆ.

## ಮದ್ರಾಸ

ತಾ. ೨೩ ಕ್ಕೆ ಗೃಹ ಮಂತ್ರಿಗಳ ಪರವಾಗಿ ಒಕ್ಕಲತನದ ಮಂತ್ರಿಗಳಾದ ಶ್ರೀ ಕೆ. ಮಾಧವ ಮೆನನ್ನರು ಗಲಭೆ ಹತ್ತಿಕ್ಕಲು ಸರಕಾರಕ್ಕೆ ವಿಶೇಷ ಅಧಿಕಾರ ಕೊಡುವ ಬಗ್ಗೆ ಮಂಡಿಸಿದ ಮಸೂದೆಯು ಸ್ವೀಕೃತವಾಯಿತು. ಕೊಳ್ಳಿಸುಲಿಗೆ ಲೂಟಿ, ಕೊಳ್ಳೆಕೊಡುವದು ಸ್ತ್ರೀಯರ ಮೇಲೆ ಬಲಾತ್ಕಾರ ಇವೇ ಮೊದಲಾದ ಅಪರಾಧಗಳಿಗೆ ಮರಣದಂಡನೆ ವಿಧಿಸಬೇಕೆಂದೂ ಪೋಲೀಸ ಸಬ್ ಇನ್ಸ್‌ಪೆಕ್ಟರರಿಗೆ, ಮ್ಯಾಜಿಸ್ಟ್ರೇಟರಿಗೆ ಗಲಭೆಯಲ್ಲಿ ತೊಡಗಿದ ಜನಸಂದಣಿಯ ಮೇಲೆ ಗುಂಡುಹಾರಿಸುವ ಅಧಿಕಾರ ವಿರಬೇಕೆಂದೂ ಈ ಮಸೂದೆಯ ಕಲಮುಗಳಲ್ಲಿ ಕಾಣಿಸಲಾಗಿದೆ.

ಭಾರತದ ಮುಖ್ಯ ಮಂತ್ರಿಗಳಾದ ಪಂ. ನೆಹರು ಹಿಂದುಸ್ತಾನದಲ್ಲಿ ಕಟ್ಟಿದ ಮೊದಲನೆಯ ಹಡಗವನ್ನು ವಿಶಾಖಾಪಟ್ಟಣದಲ್ಲಿ ಮಾರ್ಚ ೧೪ ಕ್ಕೆ ನೀರಿಗಿಳಿಸುವರೆಂದು ತಿಳಿಯುತ್ತದೆ. ಈ ಹಡಗನ್ನು ವಿಶಾಖಾಪಟ್ಟಣ ಇಂಡಿಯಾ ಶಿಪ್ ಬಿಲ್ಡಿಂಗ ಯಾರ್ಡದಲ್ಲಿ ಕಟ್ಟಲಾಗಿದ್ದು ಇದು ೮೦೦೦ ಟನ್ ಭಾರವುಳ್ಳದ್ದಿದೆ.

ಪಾಕಿಸ್ತಾನದಿಂದ ಬಂದ ಸುಮಾರು ೧೦೬೦ ನಿರಾಶ್ರಿತರಿಗೆ ಮದ್ರಾಸ ಪಟ್ಟಣದ ಮೂರು ಶಿಬಿರಗಳಲ್ಲಿ ವಾಸಸ್ಥಾನವನ್ನು ಕೊಡಲಾಗಿದೆ. ಮದ್ರಾಸದ ಶೈಕ್ಷಣಿಕ ಸಿನೇಮಾ ಸಂಸ್ಥೆಯವರು ನಿರಾಶ್ರಿತ ಬಾಲಕರಿಗಾಗಿ ಶೈಕ್ಷಣಿಕ ಚಿತ್ರಪಟವನ್ನು ತೋರಿಸಲಿದ್ದಾರೆ.

ಕರ್ನೂಲ ಕಲೆಕ್ಟರರು ತಾ ೨೦ ಕ್ಕೆ ಕೂಡಿಸಿದ ವಿಶೇಷ ದರ್ಬಾರದಲ್ಲಿ ಬಂಗನಪಲ್ಲಿ ಸಂಸ್ಥಾನವು ಮದ್ರಾಸ ಪ್ರಾಂತದಲ್ಲಿ ವಿಲೀನ ಹೊಂದಿದ್ದನ್ನು ಜಾಹೀರ ಪಡಿಸಿದರು. ೪೫ ಸಾವಿರ ಜನಸಂಖ್ಯೆಯ ೨೬೫ ಚದರು ಮೈಲು ಕ್ಷೇತ್ರದ ೭ ಲಕ್ಷ ರೂ. ವಾರ್ಷಿಕ ಉತ್ಪನ್ನದ ಈ ಸಂಸ್ಥಾನವು ದಕ್ಷಿಣ ಹಿಂದುಸ್ತಾನದಲ್ಲಿ ವಿಲೀನಹೊಂದಿದ ಮೊದಲನೇ ಸಂಸ್ಥಾನವಾಗಿದೆ.

ಕಾಂಗ್ರೆಸಿನ ಕೃಷಿ ಸುಧಾರಣಾ ಸಮಿತಿಗೆ ಶ್ರೀ ಜೆ. ಸಿ. ಕುಮಾರಪ್ಪನವರು ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ.

ಮದ್ರಾಸ ಸರಕಾರವು ಮಹಾತ್ಮರ ಕೊಲೆ ಮತ್ತು ದಿಲ್ಲಿಯಲ್ಲಿ ಪ್ರಾರ್ಥನಾ ಸಭೆಯಲ್ಲಾದ ಬಾಂಬಿನ ಸ್ಫೋಟದ ಪ್ರಕರಣ ಇವುಗಳಿಗೆ ಸಂಬಂಧಿಸಿದ ಯಾವ ಸುದ್ದಿಯನ್ನೂ ಪ್ರಸಿದ್ಧಿಸಬಾರದೆಂದು ಆಜ್ಞೆ ವಿಧಿಸಿದೆ.

## ಹೊಸದಿಲ್ಲಿ

ಆಯರ್ವಿನ ಬೀದಿಯಲ್ಲಿಯ ಸರಕಾರಿ ಮನೆಯಲ್ಲಿ ಶ್ರೀಮತಿ ಕೃಷ್ಣಮೂರ್ತಿಯವರನ್ನು ತಾ ೨೩ ರಂದು ಇರಿದು ಕೊಂದವನನ್ನು ಹಿಡಿಯಲು ಸಹಾಯವಾಗುವ ಸುದ್ದಿ ಒದಗಿಸಿದವರಿಗೆ ೨ ಸಾವಿರ ರೂ. ಗಳ ಪಾರಿತೋಷಿಕ ಕೊಡುವುದಾಗಿ ದಿಲ್ಲಿಯ ಪೋಲೀಸ ಇನ್ಸ್‌ಪೆಕ್ಟರ ಜನರಲ್ಲರು ಸಾರಿರುವರು.

ಯು. ರಾ. ಸಂ. ಭದ್ರತಾ ಮಂಡಲಕ್ಕೆ ಹಿಂದುಸ್ತಾನದ ಪರವಾಗಿ ಧುರೀಣರಾಗಿ ಹೋದ ಶ್ರೀ ಗೋಪಾಲಸ್ವಾಮಿ ಅಯ್ಯಂಗಾರರು ಪುನಃ ಲೇಕ ಸಕ್ಸೆಸ್ಸಿಗೆ ಹೋಗಲಿದ್ದಾರೆ. ಕಾಶ್ಮೀರದಲ್ಲಿ ಕಾರ್ಯಬಾಹುಲ್ಯದ ಮೂಲಕ ಶೇಖ ಅಬ್ದುಲ್ಲಾರು ಈ ಸಲ ಹೋಗಲಿಕ್ಕಿಲ್ಲವೆಂದು ತಿಳಿಯುತ್ತದೆ.

ರಾಷ್ಟ್ರವಿಘಟಕರನ್ನು ಎದುರಿಸಲು ೧೮ ರಿಂದ ೧೯ ವರ್ಷದ ಯುವಕರನ್ನು ಒತ್ತಾಯದಿಂದ ಸೇನಾದಲದಲ್ಲಿ ಸೇರಿಸಿಕೊಳ್ಳಬೇಕೆಂದು ಸಾಮ್ಯವಾದಿ ಪಕ್ಷದ ಕಾರ್ಯಕಾರೀ ಮಂಡಲದವರು ಸರಕಾರಕ್ಕೆ ಸೂಚಿಸಿದ್ದಾರೆ.

ಶ್ರೀ ಅರವಿಂದಘೋಷ, ಶ್ರೀ ರಮಣ ಮಹರ್ಷಿ ಹಾಗು ಡಾ. ಭಗವಾನದಾಸರಂಥವರು ಈಗ ಮುಂದೆ ಬಂದು ವಿಚಾರ ವಿನಿಮಯ ಮಾಡಿ ದೇಶಕ್ಕೆ ಮಾರ್ಗ ತೋರಿಸಬೇಕೆಂದು ಶ್ರೀ ಜಯಪ್ರಕಾಶ ನಾರಾಯಣರು ಹೇಳಿದರು.

ಸ್ಟರ್ಲಿಂಗ ಸಂಗ್ರಹದ ಬಗ್ಗೆ ಇಂಗ್ಲಂಡ ಮತ್ತು ಹಿಂದುಸ್ತಾನ ಪ್ರತಿನಿಧಿಗಳ ನಡುವೆ ಮಾತುಕತೆಗಳಾಗಿ ಆಗಸ್ಟ ೧೪ ಕ್ಕಾದ ಒಡಂಬಡಿಕೆಯ ಅವಧಿಯನ್ನು ೩೦ ಜೂನ ೧೯೪೮ ರ ವರೆಗೆ ಬೆಳೆಸಬೇಕೆಂದು ನಿರ್ಣಯವಾಯಿತು. ಈ ನಿರ್ಣಯದನ್ವಯ ೩೦ ದಶಲಕ್ಷ ಪೌಂಡಿನ ಶಿಲ್ಕನ್ನು ಮುಂದೆ ಸಾಗಿಸಲಾಗುವದು. ಜಾಗತಿಕ ಡಾಲರಿನ ಕೊರತೆಯನ್ನು ಅನುಲಕ್ಷಿಸಿ ಹಿಂದುಸ್ತಾನವು ಈ ೬ ತಿಂಗಳಲ್ಲಿ ೧೦ ದಶಲಕ್ಷ ಪೌಂಡುಗಳಿಂತ ಹೆಚ್ಚು ಹಣವನ್ನು ಕೇಂದ್ರವು ಕಾಯ್ದಿಟ್ಟ ಶಿಲ್ಕಿನಿಂದ ತೆಗೆಯುವದಿಲ್ಲೆಂದು ಒಪ್ಪಿದೆ. (ಹಿಂದುಸ್ತಾನ ಪಾಕಿಸ್ತಾನಗಳಿಗೆ ಇಂಗ್ಲಂಡವು ೧೧೭೦ ದಶಲಕ್ಷ ಪೌಂಡು ಸಾಲ ಕೊಡಬೇಕು ಇದರಲ್ಲಿ ೧೨೦ ದಶಲಕ್ಷ ಕೊಟ್ಟು ಮುಟ್ಟಿಸಿದೆ.)

ಕೇಂದ್ರ ಸರಕಾರದ ಅಧಿಕಾರಿಯೊಬ್ಬರ ಪತ್ನಿಯಾದ ಶ್ರೀಮತಿ ಪಿ. ಆರ್ ಕೃಷ್ಣಮೂರ್ತಿಯವರು ಹಾಲು ತೆಗೆದುಕೊಂಡು ಬರುವಾಗ ಮನೆಯ ಬಾಗಿಲ ಬಳಿಗೆ ಅವರನ್ನು ಅಜ್ಞಾತ ವ್ಯಕ್ತಿಯೊಬ್ಬನು ಇರಿದು ಕೊಂದು ರತ್ನದ ಆಭರಣಗಳನ್ನು ಅಪಹರಿಸಿಕೊಂಡು ಹೋಗಿದ್ದಾನೆ.

ಹಿಂದುಸ್ತಾನ ಸರಕಾರದ ಹಣಕಾಸಿನ ಶಾಖೆಯಿಂದ ಕೆಳಗಿನ ಪ್ರಕಟನೆ ಹೊರಟಿದೆ,

ಘಟನಾ ಸಮಿತಿಯ ಮುಸ್ಲಿಂಲೀಗ ಪಕ್ಷದ ಸೆಕ್ರೆಟರಿಗಳಾದ ಬೇಗಮ ಅಜೀಜು ರಸೂಲರು ಘಟನಾಸಮಿತಿಯಲ್ಲಿಯ ಲೀಗ ಪಕ್ಷದ ವಿಸರ್ಜನೆಯ ಬಗ್ಗೆ ವಿಚಾರ ಮಾಡಲು ದಿಲ್ಲಿಯಲ್ಲಿ ತಮ್ಮ ಪಕ್ಷದ ಸಭೆ ಕರೆದಿದ್ದರು.

ಪೋಲೀಸರಿಗೆ ದಿಲ್ಲಿಯ ಸಬಜಿ ಮಂಡಿ ಎಂಬ ಭಾಗದಲ್ಲಿ ಒಂದು ಕಡೆಗೆ ತಾ. ೨೩ ರಂದು ನೆಲದಲ್ಲಿ ಹೂಳಿಟ್ಟ ೧೦ ಕೈ ಬಾಂಬುಗಳು ೧೭೬೦ ರಾಯಫಲ್ ಕಾಡತೂಸುಗಳು ಸಿಕ್ಕಿರುವವು. ಈ ವರೆಗೆ ಯಾರೂ ಬಂಧಿತರಾಗಿಲ್ಲ.

## ಮಧ್ಯಪ್ರಾಂತ

ಮಹಾತ್ಮರ ಚಿತಾಭಸ್ಮವನ್ನು ಕಾಯ್ದಿಟ್ಟುಕೊಂಡವರು ಅದನ್ನು ಫೆಬ್ರುವರಿ ೨೮ ನೇ ತಾ. ನ ಒಳಗಾಗಿ ಸಮೀಪದ ಸಮುದ್ರ ಅಥವಾ ನದಿಗಳಲ್ಲಿ ವಿಸರ್ಜಿಸಬೇಕೆಂದೂ ಅದನ್ನು ಕಾದಿಟ್ಟುಕೊಂಡು ಭಕ್ತಿ ಪ್ರದರ್ಶಿಸುವದು ಅವರ ಆದೇಶಗಳಿಗೆ ಸರಿಹೋಗುವದಿಲ್ಲವೆಂದೂ ಶ್ರೀ ಮಶ್ರೂವಾಲಾರವರು ವರ್ಧಾದಿಂದ ಪ್ರಕಟಸಿದ್ದಾರೆ.

ನಾಗಪುರದ 'ಆದೇಶ' ಎಂಬ ವಾರ ಪತ್ರಿಕೆಯ ಸಂಪಾದಕರಾದ ಶ್ರೀ ಪಿ. ಬಿ ಭಾವೆ ಎಂಬವರನ್ನು ಮಹಾತ್ಮರ ಕೊಲೆಯ ಒಳಸಂಚಿಗೆ ಸಂಬಂಧಿಸಿದ ಆರೋಪದ ಮೇಲೆ ಪೋಲೀಸರು ಸೆರೆ ಹಿಡಿದಿದ್ದಾರೆ. ಆರೋಪಿಯ ಮನೆಯನ್ನು ಹುಡುಕಲು ಅನೇಕ ಕಾಗದ ಪತ್ರ ಸಿಕ್ಕಿವೆ. ಅವನ್ನು ವಶಪಡಿಸಿಕೊಳ್ಳಲಾಯಿತು. ಮಹಾತ್ಮರ ಮರಣಾನಂತರ ಆದೇಶ ಪತ್ರಿಕೆಯ ಕಚೇರಿಯು ಗಲಭೆಗೆ ಗುರಿಯಾಗಿ ಹಾನಿಗೊಂಡು ಫೆಬ್ರುವರಿ ೧ ನೇತಾ. ನಿಂದ ಪತ್ರಿಕೆ ಹೊರಡುತ್ತಿಲ್ಲ.

ಮಧ್ಯಪ್ರಾಂತ ಮತ್ತು ವರ್‍ಹಾಡ ಸರಕಾರದವರು ತಾ ೨೩ರಂದು ಒಂದು ಆಜ್ಞೆ ಹೊರಡಿಸಿ ಮಹಾತ್ಮರ ಕೊಲೆ ಹಾಗು ಬಿರ್ಲಾಭವನದಲ್ಲಿ ಆದ ಬಾಂಬಿನ ಸ್ಫೋಟಕ್ಕೆ ಸಂಬಂಧಿಸಿದ ಸುದ್ದಿಗಳನ್ನು ಯಾವದೇ ವಿಧದಲ್ಲಿ ಪ್ರಸಿದ್ಧಿಸಕೂಡದೆಂದು ವಿಧಿಸಿದ್ದಾರೆ.

## ಪಶ್ಚಿಮ ಬಂಗಾಲ

ಆಗ್ನೇಯ ಏಶಿಯಾ ತರುಣ ಪರಿಷತ್ತಿಗೆ ಬಂದಿದ್ದ ಪಾಕಿಸ್ತಾನದ ಶಿಷ್ಟಮಂಡಲದ ಧುರೀಣರು ಮಹಾತ್ಮಾ ಗಾಂಧಿಯವರು ಹಿಂದುಸ್ತಾನ ಪಾಕಿಸ್ತಾನಗಳ ಸ್ವಾತಂತ್ರ್ಯಶಿಲ್ಪಿಗಳೆಂದು ಹೇಳಿದರು

ಮಹಾತ್ಮರ ಕಾರ್ಯದರ್ಶಿಗಳಾದ ಶ್ರೀ ಪ್ಯಾರೇಲಾಲರು ತಾ. ೨೦ ಕ್ಕೆ ಕಲಕತ್ತೆಗೆ ಬಂದು ೨೧ ತಾ ಗೆ ನೌಖಾಲಿಗೆ ತೆರಳಿದರು. ಕಳೆದ ವರ್ಷ ಮಹಾತ್ಮರು ಬಂಗಾಲದ ಪ್ರವಾಸ ಕೈಕೊಂಡಂದಿನಿಂದ ಶ್ರೀ ಪ್ಯಾರೇಲಾಲರು ನೌಖಾಲಿಯಲ್ಲಿ ಕೆಲಸಮಾಡುತ್ತಿದ್ದಾರೆ.

## ಪಶ್ಚಿಮ ಪಂಜಾಬ

ಕಲಕತ್ತೆಯಲ್ಲಿ ತಾ ೨೩ ಕ್ಕೆ ನೇಪಾಳಿ ಸಿಪಾಯಿಯೊಬ್ಬನು ಹಾಗು ಮಾರವಾಡಿ ಅಂಗಡಿಯ ಇನ್ನೊಬ್ಬ ನೌಕರನು ಬ್ಯಾಂಕಿಗೆ ನೋಟು ಹಣ ಹಾಗು ಚೆಕ್ಕು ತೆಗೆದುಕೊಂಡು ಹೋಗುತ್ತಿದ್ದಾಗ ಪೊಲಕ್ ಬೀದಿಯಲ್ಲಿ ಮೂವರು ಸಶಸ್ತ್ರ ಜನರು ಮೋಟಾರ ಸಾಯಕಲ್ ಮತ್ತು ಕಾರಿನಲ್ಲಿ ಬಂದು ಗುಂಡುಹಾರಿಸಿ ಗಾಯಗೊಳಿಸಿ ೫೫೦೦ ರೂ ಹಾಗು ೧೭೫೦೦ ರೂ.ದ ಚೆಕ್ಕು ಅಪಹರಿಸಿಕೊಂಡು ಹೋಗಿರುವರು. ಕೆಲವರು ಅವರನ್ನು ಬೆನ್ನುಹತ್ತಲು ಅವರು ಒಂದು ಬಾಂಬು ಒಗೆದು ಒಬ್ಬ ಕೂಲಿಕಾರನನ್ನು ಗಾಯಗೊಳಿಸಿದರು. ಮೂವರು ಗಾಯಾಳುಗಳನ್ನು ಆಸ್ಪತ್ರೆಗೆ ಹಾಕಲಾಗಿದೆ.

## ಹಿಂದೀ ಸಂಸ್ಥಾನ

ಹೈದರಾಬಾದ ಸಂಸ್ಥಾನದ ನೌಕರರ ಅಸಭ್ಯತೆ ಲಂಚಗುಳಿತನ ಇವನ್ನು ನಿರ್ಮೂಲಗೊಳಿಸಲು ಹೈದರಾಬಾದ ಸರಕಾರವು ಒಂದು ಆಜ್ಞೆ ಹೊರಡಿಸಿ ಅಧಿಕಾರಿಗಳ ದೋಷಗಳನ್ನು ಪರೀಕ್ಷಿಸ[illegible] ಒಂದು ಸಮಿತಿಯನ್ನು ನೇಮಿಸಿದೆ. ಈ ಸ[illegible]ಯಲ್ಲಿ ಮೂವರು ಮಂತ್ರಿಗಳಿದ್ದು ಉಪಮುಖ್ಯ ಮಂತ್ರಿಗಳು ಅಧ್ಯಕ್ಷರಾಗಿರುವರು.

ಅಖಿಲ ಭಾರತ ಸಂಸ್ಥಾನ ಪ್ರಜಾ ಪರಿಷತ್ತಿನ ಸಾಧಾರಣ ಸಭೆಯು ಮಾರ್ಚ ತಾ ೧೫ಕ್ಕೆ ಇಂದೂರಲ್ಲಿ ಸೇರುವದಾಗಿ ತಿಳಿಯುತ್ತದೆ.

ಕಾಶ್ಮೀರದ ಕದನದಲ್ಲಿ ಧಾಳಿಗಾರರು ಹಿಮ್ಮೆಟ್ಟುತ್ತಿದ್ದಾರೆ. ನೌಶೇರಾಭಾಗದಲ್ಲಿ ಮಳೆ ಈಗ ಕಡಿಮೆಯಾದ್ದರಿಂದ ಹಿಂದೀ ಸೈನ್ಯಗಳು ಎಲ್ಲ ಕಡೆಯಿಂದ ವೈರಿಬಲವನ್ನು ಭೇದಿಸುತ್ತಿವೆ. ಜಮ್ಮುವನ್ನು ಪ್ರವೇಶಿಸಿದ ತೋಫುಗಳನ್ನೆಲ್ಲ ವಶಪಡಿಸಿಕೊಳ್ಳಲಾಗಿದೆ. ಆದರೆ ಕೆಲವು ತೋಫುಗಳು ಪಾಕಿಸ್ತಾನದ ಗಡಿಯಲ್ಲಿದ್ದುಕೊಂಡು ಗರ್ಜಿಸುತ್ತಿದ್ದುದರಿಂದ ಅವುಗಳ ಮೇಲೆ ಕೈಮಾಡಿಲ್ಲ. ಪೂಂಛದಲ್ಲಿ ವೈರಿಗಳನ್ನು ಸಂಪೂರ್ಣ ಸೋಲಿಸಲಾಗಿದೆ.

ಪುದುಕೋಟೆ ಸಂಸ್ಥಾನದ ಒಂದು ಹಳ್ಳಿಯಲ್ಲಿ ಇದೇ ೧೪ ತಾ. ಗೆ ೩೦ ಸಶಸ್ತ್ರ ದರೋಡೆಗಾರರು ಒಂದು ಮನೆಹೊಕ್ಕು ನಗದು ಹಣ ಮತ್ತು ೪೦೦೦ ರೂ. ಬೆಲೆಯ ರತ್ನಾಭರಣ ದೋಚಿದ್ದಾಗಿ ವರದಿ ಬಂದಿದೆ.

ಹಿಂದು ಮಹಾಸಭಾ ಮತ್ತು ರಾ. ಸ್ವ. ಸೇವಕ ಸಂಘಕ್ಕೆ ಸಂಬಂಧಿಸಿದ ಸ್ಥಳಗಳನ್ನು ಮೇವಾಡ ಸರಕಾರದ ಆಜ್ಞೆಯ ಮೇರೆಗೆ ಸಂಸ್ಥಾನದ[illegible] ಶೋಧಿಸಲಾಯಿತು. ಕೆಲವು ಸಾಹಿತ್ಯ ದೊರೆತಿದ್ದು ಪೋಲೀಸರು ಮುಸ್ಲಿಂ ಲೀಗಿನ ಹಲವು ಸದಸ್ಯರನ್ನೊಳಗೊಂಡು ಎಂಟು ಜನರನ್ನು ಬಂಧಿಸಿದ್ದಾರೆ.

## ಪಾಕಿಸ್ತಾನ

ಪಾಕಿಸ್ತಾನ ಕೇಂದ್ರ ಶಾಸನ ಸಭೆಯ ಆಯವ್ಯಯದ ಅಧಿವೇಶನವು ತಾ ೨೩ಕ್ಕೆ ಪ್ರಾರಂಭವಾಯಿತು. ಕಾಂಗ್ರೆಸ ಪಕ್ಷದವರ ಆಸನಗಳೆಲ್ಲ ಬಹುತರವಾಗಿ ಬರಿದೇ ಇದ್ದವು. ಮೊದಲು ಕೇಂದ್ರ ಶಾಸನ ಸಭೆಯ ಅಧ್ಯಕ್ಷರಾದ ಕಾಯದೆ ಆಜಮ ಜಿನ್ನಾರವರು ಪಾಕಿಸ್ತಾನ ಘಟನೆಗೆ ನಿಷ್ಠೆಯಿಂದ ನಡೆವುದಾಗಿ ಪ್ರತಿಜ್ಞೆ ಮಾಡಿದರು. ನಂತರ ೪೫ ಸದಸ್ಯರ ಪ್ರತಿಜ್ಞಾವಿಧಿ ಜರಗಿತು. ಅವರಲ್ಲಿ ಪೂರ್ವ ಬಂಗಾಳದ ಹಿಂದುಗಳೂ ಇದ್ದರು, ಪಶ್ಚಿಮ ಪಾಕಿಸ್ತಾನದ ಹಿಂದು ಮಹಾಸಭೆಯ ಸದಸ್ಯರು ಯಾರೂ ಇರಲಿಲ್ಲ.

ಪಾಕಿಸ್ತಾನ ಸರಕಾರದ ಕೇಂದ್ರ ಶಾಸನ ಸಭೆಯಲ್ಲಿ ತಾ. ೨೩ ಕ್ಕೆ ಗಾಂಧೀಜಿಯ ನಿಧನದ ಬಗ್ಗೆ ಅಧಿಕೃತ ದುಃಖ ಪ್ರದರ್ಶಕ ಗೊತ್ತುವಳಿಯಾಗಿ ಅದನ್ನು ಭಾರತ ಸರಕಾರಕ್ಕೆ ಕಳುಹಿಲಾಗಿದೆ.

---

ಸುಕೇತ ಸಂಸ್ಥಾನದ ಆಡಳಿತೆ ಕೂಡಲೆ ವಹಿಸಿಕೊಳ್ಳಬೇಕೆಂದು ಸಂಸ್ಥಾನ ಶಾಖೆಯು ಪೂರ್ವ ಪಂಜಾಬ ಸರಕಾರಕ್ಕೆ ತಿಳಿಸಿದೆ.

ಒಂದು ಕವಿಲೀಲೆ

# ಅಮರ ಕೋಟೆ

( ವಿಡಂಬನಕಾರ : ಬ್ರಹ್ಮಾಂಡ ಭಾಂಡೋದರ )

"ಮಹಾತ್ಮರು ಅಮರರಾದರು" ಎಂದು ಎಲ್ಲ ಪತ್ರಿಕೆಗಳಲ್ಲೂ ಪ್ರಕಟವಾದುದನ್ನು ಕರ್ನಾಟಕದ ಕವಿಕುಲ ಲಲಾಮರು ಕೇಳಿದರು. ಅವರ ಕಂಪನಿಯ ಕಾರ್ಯದರ್ಶಿಗಳಾದ ಅಭಿನವ ಲಕ್ಷ್ಮೀಶನು ಕರ್ನಾಟಕದ ಒಂದು ಚೂತವನದಲ್ಲಿ ಕವಿಸಮ್ಮೇಲನವನ್ನು ಕರೆದನು. ಕವಿಗಳೆನ್ನಹತ್ತಿದರು: 'ಗಾಂಧಿ ಹೇಗೆ ಅಮರನಾದ? ಚಿತ್ರದಲ್ಲಿ ಅವನನ್ನು ಅಮರಿಸಿದರೆ ಅದನ್ನು ಹುಳು ತಿಂದು ಹಾಳುಮಾಡಿ ಬಿಡುತ್ತದೆ, ಮೂರ್ತಿಯನ್ನು ರಚಿಸಿದರೆ ಅದನ್ನು ವಿಗ್ರಹ ಭೇದಕರಾದ ಅಭಿನವ ಘಜನಿಮಹಮ್ಮದರು ಎಂದಾದರೊಂದು ದಿನ ಗತಿಗಾಣಿಸದಿರರು. ಆದುದರಿಂದ ಕಾವ್ಯದಲ್ಲಿ ನಾವು ಅದನ್ನಿಳಿಸಿದಲ್ಲದೆ ಗಾಂಧಿ ಹೇಗೆ ಅಮರನಾದಾನು?' ಇದೇ ಸಮ್ಮೇಲನದಲ್ಲಿ ಚರ್ಚೆಯ ಮುಖ್ಯ ವಿಷಯವಾಯಿತು.

೨ನೆಯ ಕುಮಾರವ್ಯಾಸನೆಂದ: 'ನಮ್ಮ ಪದ್ಯಗಳನ್ನಾದರೂ ಪುಸ್ತಕದಲ್ಲೇ ಬರೆಯಬೇಕಾಗಿರುವುದರಿಂದ ಅದನ್ನು ಹುಳು ತಿಂದು ಬಿಟ್ಟರೆ...?'

ಕೂಡಲೆ ಕುಶಾಗ್ರಮತಿಯಾದ ೩ನೆಯ ಪಂಪನೆಂದ: 'ಅಲ್ಲವಯ್ಯ, ನಮ್ಮ ಹಳೆಯ ಪಂಪ ತಾಳೋಲೆಯ ಮೇಲೆ ಬರೆದ ವಿಕ್ರಮಾರ್ಜುನ ವಿಜಯವೀಗ ಸಾವಿರಾರು ಪುಸ್ತಕಗಳಲ್ಲಿ ರಾರಾಜಿಸುತ್ತಿಲ್ಲವೆ? ಒಂದು ಪುಸ್ತಕವನ್ನು, ಇಲ್ಲವೆ ...ರನ್ನು ಹುಳುತಿಂದರೆ ಮತ್ತೆ ೯೦೦ ಉಳಿಯುವುವಲ್ಲ! ಅದರ ಮೇಲೆ ಪುನರ್ಮುದ್ರಣಗಳಾಗುತ್ತ ಹೋಗಿ ಮಾನವನು ಮರ್ತ್ಯ (Mortal)ನಾದರೂ ಅವನ ಸಂತತಿ ಅಮೃತ (Immortal) ವಾಗಿರುವಂತೆ ಪುನಃಪುನರ್ಮುದ್ರಣಗಳಿಂದ ( Reprint ) ನಮ್ಮ ಕಾವ್ಯಗಳು ಅಮರವಾಗಿ ಉಳಿಯುವುವು. ಆಗ ನಿಜವಾಗಿ ಗಾಂಧಿ ಅಮರನಾಗುತ್ತಾನೆ; ಪುರಾಣೋಕ್ತ ಅವತಾರಗಳ ಜೊತೆಗೆ ಅವನೂ ೧೧ನೆಯ ಅವತಾರವೆಂದು ಗಣಿಸಲ್ಪಟ್ಟು ಭಕ್ತವರ್ಯರಿಂದ ನಿರವಧಿ ಕಾಲ ಪೂಜಿಸಲ್ಪಡುತ್ತಾನೆ.'

'ಅಷ್ಟರಲ್ಲಿ ಅಭಿನವ ಹರಿಹರನೆದ್ದು— 'ಅಲ್ಲ ಪಯ್ಯಾ, ಗಾಂಧಿಯನ್ನೇಕೆ ನಾವು ಅಮರಗೊಳಿಸಬೇಕು? ಅವನು ಹುಟ್ಟಿದಾರಭ್ಯ ಒಂದು ಪದ್ಯವನ್ನು ಕೂಡ ಬರೆದಿಲ್ಲವಲ್ಲ?' ಎಂದು ದನಿ ತೆಗೆದ.

ಅದಕ್ಕುತ್ತರವಾಗಿ ೨ನೆಯ ಮುದ್ರಣದ ಅಲ್ಲಲ್ಲ (Secondhand) ೨ನೆಯ ದರ್ಜೆಯ ಮುದ್ದಣನು, 'ನಾವು ಮೊದಲು ಅವನ ಮೇಲೆ ಕಾವ್ಯ ಬರೆದು ಅಮರರಾಗುತ್ತೇವೆ. ಬಳಿಕ ಹೂವಿನಜೊತೆಗಿನ ನಾರಿನಂತೆ ಗಾಂಧಿಯೂ ನಮ್ಮೊಡನೆ ಅಮರಲೋಕವನ್ನು ಸೇರುತ್ತಾನೆ. ಸೇರಿದರೆ ಸೇರಲಿ. ಅವನು ಸೇರುತ್ತಾನಲ್ಲಾ ಎಂದು ಶಂಕಿಸಿದರೆ ನಮಗೆ ಅಮರಪದ ಇನ್ನೊಂದು ಸಂದರ್ಭದಲ್ಲಿ ಸಿಗುವುದು ದುರ್ಲಭವಾಗಬಹುದು. ಸುವರ್ಣ ಸಂಧಿಯು ಮಾನವನಿಗೆ ಒಮ್ಮೆ ಮಾತ್ರ ಸಿಕ್ಕೀತು! (Opportunity occurs once in the life of man) ಅದನ್ನು ಹಿಡಿಯದೆ ಬಿಟ್ಟರೆ ಮತ್ತೆ ಅಂಥ ಅವಕಾಶ ಸಿಗದೆಯೇ ಇರಬಹುದು. ಆದುದರಿಂದ ನಾವೆಲ್ಲರೂ ತಡಮಾಡದೆ ಈಗ ಕಾವ್ಯರಚನೆಗೆ ಕೈಹಾಕಬೇಕು' ಎಂದ.

ಈ ಗೊತ್ತುವಳಿಯನ್ನು ಸಭೆಯಲ್ಲಿಡಲಾಗಿ ಅದಕ್ಕೊಂದು ತಿದ್ದುಪಡಿ ಬಂದಿತು. 'ನಾವೆಲ್ಲರೂ ಬೇರೆ ಬೇರೆ ಬರೆದರೆ ಅಥವಾ ಬೇರೆ ಬೇರೆ ಪತ್ರಿಕೆಗಳಿಗೆ ಕಳುಹಿದರೆ ಅವುಗಳ ಗತಿ ಬೇರೆ ಬೇರಾದೀತು ಕಾರ್ಯದರ್ಶಿ ಮಾತ್ರ ಕಂಪನಿಯ ಹೆಸರಿನಲ್ಲಿ ಸಹಿ ಹಾಕಲಿ, ಬರೆದದ್ದನ್ನೆಲ್ಲ ಒಟ್ಟಿಗೆ ಕಳುಹಿಸೋಣ. ಇದು ಪ್ರಜಾಸತ್ತೆಯ ಯುಗ. ಅದೇ ಮಾರ್ಗದಲ್ಲಿ ನಾವು ನಡೆದರೆ ವಿಮರ್ಶಕರು ಹೇಗೆ ಕಾವ್ಯದೋಷವನ್ನು ಹುಡುಕಿ ಟೀಕಿಸುತ್ತಾರೋ ಪರೀಕ್ಷಿಸೋಣ' ಎಂಬುದೇ ಆ ತಿದ್ದುಪಡಿಯ ಆಶಯ.

ಗೊತ್ತುವಳಿಯನ್ನು ಮತಕ್ಕೆ ಹಾಕಿದಾಗ ಅದು ತಿದ್ದುಪಡಿ ಸಹಿತ ಪಾಸಾಯಿತು. ಅನಂತರ ಪ್ರತಿಯೊಬ್ಬ ಕವಿಯೂ ಆ ಮಾವಿನತೋಪಿನ ಮೂಲೆಮೂಲೆಗಳಲ್ಲಿ ಪದ್ಮಾಸನ ಹಾಕಿ ಸ್ಫೂರ್ತಿದೇವಿಯನ್ನು ಒಲಿಸಿಕೊಳ್ಳಲು ಧ್ಯಾನಸ್ಥನಾಗಿ ಕುಳಿತನು.

ಕಳೆಯಿತು ಗಂಟೆ. ಅನಂತರ ಕವಿಗಳೊಬ್ಬೊಬ್ಬರೇ ಕಣ್ಣು ತೆರೆದರು. ಪ್ರತಿಭೆಯ ಕಣ್ಣಿನಿಂದ ಗಾಂಧಿಯನ್ನು ಕಂಡರು, ಬರೆಯತೊಡಗಿದರು. ಮರಣವೆಂದರೆ ಕರುಣಾಜನಕವಿರುವುದರಿಂದ ಮೊದಲನೆಯ ಚೂತವನ ಚೈತ್ರನು—

"ಮರಣವೆಂಬ ದಾರುಣ ಶಬ್ದವದು
ನರನಾಡಿಗಳಲಿ ಮಿಡಿಯುತಿದೆ
ರೋರೋ ಎಂದೊರಲುತಿಹರಲ್ಲಿ
ಒರಲುತಿದೆ ಬಾಪೂಜಿ ಭಾರತವಿಲ್ಲಿ"

ಎಂದು ಪದ್ಯವನ್ನಾರಂಭಿಸಿ 'ರೋ ರೋ' ಎಂದು ರೋದಿಸಿದ.

ಬರೆಯುವಾಗ ಪ್ರತಿಯೊಬ್ಬನೂ ಮಾಗಿನಲ್ಲೇ ಹಾಡಿಕೊಳ್ಳುತ್ತಿದ್ದುದರಿಂದ ಪಕ್ಕದಲ್ಲಿ ಕುಳಿತ ಕವೀಂದ್ರನಿಗೆ ಅದು ಅಸ್ಪಷ್ಟವಾಗಿ ಕೇಳಿಸುತ್ತಿತ್ತು. ಮೇಲಿನ ಸಾಲುಗಳನ್ನು ಕೇಳಿದೊಡನೆಯೇ ಹತ್ತಿರದಲ್ಲಿದ್ದ ಕವಿಕಂಠಾಭರಣನು—'ಮೊದಲೇ ಮರಣ ಎಂಬ ಶಬ್ದಹಾಕಿ [ವಾಚ್ಯವಾಗಿ ಅಪಶಕುನ ನುಡಿದೆಯಲ್ಲೋ; ನನ್ನದು ನೋಡು' ಎಂದು—

'ಧನ್ಯನಾದನು ಬ್ರಹ್ಮ ಸೃಷ್ಟಿಸಿ
ಧನ್ಯನಾದನು ಪೊರೆದು ವಿಷ್ಣು
ಧನ್ಯನಾದ ಮಹೇಶ್ವರನು ಪ್ರಾಣಂಗಳಂ
ಕೊಂಡು'

ಎಂದು ಪ್ರಾರಂಭಿಸಿ ಬಿಟ್ಟ. ಈ ಗದ್ದಲದಿಂದ ಶಾಂತಿಭಂಗ ಹೊಂದಿದ ಸಿಟಿ ಹೈಸ್ಕೂಲಿನ ೪ನೆಯ ಆ ವರ್ಗದ ರಸರತ್ನಾಕರನು — 'ಇದೇನು ಪುರಾಣ ಕಾವ್ಯ ಪ್ರಾರಂಭಿಸಿ ಬಿಟ್ಟೆಯೊ? ಇಲ್ಲಿ ಕೇಳು ಎಂದವನೇ,

ಅಹಾ ಮಹಾತ್ಮನೇ
ಮೋಹನದಾಸ ಗಾಂಧಿಯೇ,
ನೀನು ಅಮರನಾದೆಯೋ
ನೀನು ಮರಣಹೊಂದಿದೆಯೋ?'

ಎಂದು ಕೋಕಿಲೇತರ ಸ್ವರ ತೆಗೆದ.

ಅದಕ್ಕೆ ಅವನ ಸಹಯೋಗಿಯು ಕಡು ಕೋಪದಿಂ ಕನಲಿ ಕಿಡಿಯುಗುಳುತ್ತ ಇಂತೆಂದಂ: 'ಕವಿ ಜಾತಿ ಕಲಂಕಪ್ರಾಯನೇ, ಇದೇನಿದು ನೀನು ಮಾಡಿದ್ದು? ನಾವು ಗಾಂಧಿಯನ್ನು ಅಮರನನ್ನಾಗಿ ಮಾಡುವುದರ ಮೊದಲೇ ಅವನು ಅಮರನಾದನೆಂದು ಸಂಬೋಧನೆಯಲ್ಲಿ ಹೇಳಿರುವುದರ ಅರ್ಥವೇನು? ಥೂ, ಸುಡು ಅದನ್ನು; ಇಲ್ಲಿ ಕಿವಿದೆರೆ:

ಪ್ರಹಿಂಸಪರಿಣಾಮವನ್ನರಿತ ಲರಸಿದ್ಧ ಮುತ್ತು
ಅಹಿಂಸ ಶಸ್ತ್ರವ ಧರಿಸಲರಿಸಿದ್ದ ಮುತ್ತು,
ಸರ್ವ್ವೃಷ್ಟಿ ತೇಜದಲಿ ಸಾಧಿಸಿದ್ದ ಮುತ್ತು
ದುರ್ಗವೆಷ್ಟ ತೇಜದಲಿ ಭೇದಿಸಿದ್ದ ಮುತ್ತು
ಎಂದು ಶಂಖವಾದ್ಯ ಮಾಡಿದ.

ಈ ಅಪಭ್ರಂಶದಿಂದ ಸಮಾಧಿಭಂಗಹೊಂದಿದ ಕೆರಳಿದ ಉಪ ಶಿಕ್ಷಕನಾದ ಕೇಸರಿ ಕವಿಯು—

'ವೈಕುಂಠಕ್ಕೋಗುವನ
ರಾಮನಾಮವ ಜಪಿಸುವವನ
ಎಲ್ಲರ ಕಣ್ಮರೆ ಆಗುವನ'
ಎಂದು ಗಜರಿದ.

ಅದಕ್ಕೆ, 'ಏನಯ್ಯಾ ಇದು? ಜಾತ್ಯತೀತತೆಯನ್ನು ಬೋಧಿಸಿದ ಗಾಂಧಿಯನ್ನು ನಿನ್ನ ಸ್ವಾರ್ಥಕ್ಕಾಗಿ ವೈಷ್ಣವನಾದ ನೀನು ವೈಕುಂಠಕ್ಕೆ ಒಯ್ಯುವೆಯಾ? ಆಗದಾಗದು. ನಿನಗೆ ತಕ್ಕ ಪ್ರತೀಕಾರ ಮಾಡಲು ನಾನು ಅವನನ್ನು ಪರಶಿವನ ಪಾದಾರವಿಂದಕ್ಕೆಳೆದೊಯ್ಯುತ್ತೇನೆ ನೋಡು—

'ಲಯವಾದೆಯಾ ನಿಜನೆಲೆಯೊಳು
ಶ್ರೀ ಗಾಂಧಿ ಮಹಾತ್ಮಾ!
ದಯೆತೋರದೆ ಕರೆದೊಯ್ದನೆ
ಭವದೇವ ಪರಮಾತ್ಮಾ॥'

ಭವದೇವನ ಕೈಯಲ್ಲಿ ಸಿಕ್ಕಿದ್ದಾನೀಗ ಗಾಂಧಿ; ಅವನನ್ನು ಇನ್ನು ಯಾವ ಕವಿಯೂ ಬಿಡಿಸಿಕೊಂಡು ಹೋಗಲಾರ— ಎಂದು ಕುಮಾರ ಪುರಂದರ ಕವಿಯು ಕಿರಿಚಿದ.

ಈ ಕಿರಿಚಾಟ ಕೇಳಿ ಘನಕೋಪಾಟೋಪಮಂ ತಾಳ್ದರುಣತರ ತರತ್ನಾರನೇತ್ರನಾಗಿ ಶಿವಾಶ್ರಮದ ಅಭಿನವ ಬಸವನು— 'ಇದೆಂತಹ ವಧ್ಯವಾದ ಪದ್ಯ; ಅಲಂಕಾರವಿಲ್ಲ ಚಮತ್ಕಾರವಿಲ್ಲ. ಇಲ್ಲಿ ಕಿವಿ ಚಾಚು—

ಬೆಳಗೀತ-ಜ್ಯೋತಿ-ತೊಲಗೀತ—!
ಇಳೆಯೊಳು ಹೋಳಿಯಾತ-ಗಾಂಧೀ ಜ್ಯೋತಿ॥
ಮೃತ್ಯುಲೋಕವ ಪಣತಿಯ ಮಾಡಿತ್ತ—!
ಸತ್ಯಹಿಂಸೆಗಳೆರಡ ಬತ್ತಿ ಹಾಕಿತ್ತ॥
ಎಂದು ಮುಗಿಸುವಷ್ಟರಲ್ಲೇ—

ಲೆಕ್ಕಾಚಿಕ್ಕೆಯ ಕರವಾಳು ಎಂದು ಗದ್ದರಿಸಿ ಬಿ. ಎ. ಆನರ್ಸ್ ಪಾಸಾದ ಪ್ರಗತಿಶೀಲ ಕಾವ್ಯಕಾರದೆಯು— 'ಸತ್ಯ ಹಿಂಸೆಯೆಂದು ಇದ್ದುದನ್ನು ಇದ್ದ ಹಾಗೆ ಹೇಳಿದ್ದು ಸರಿಯಾದರೂ ಅವುಗಳನ್ನು ಬತ್ತಿ ಮಾಡಿದ್ದು ಭಾವುಕತನದ, ಧೋರಣೆ ಸ್ವಭಾವದ ರೂಪಕವಾಗಿ ಹೋಯ್ತು. ಅದು ಹಾಗಿರಕೂಡದು. ಇತ್ತ ಕೇಳಿ—

ಅಹಿಂಸೆ ಎಂಬ ಅಸಿಯಿಂ
ದೇಶವಂ ಗಳಿಸಿದೆ
ಉಪವಾಸವೆಂಬ ಆಯುಧದಿಂ
ದಾಸ್ಯವಂ ಬಿಡಿಸಿದೆ'

ಎಂದ ಕೂಡಲೆ ಸಿಡಿಮಿಡಿಗೊಂಡು ಅಸಿಸ್ಟೆಂಟ್ ಮಿಸ್ಟ್ರೆಸ್ ಆದ ಆಧುನಿಕ ಕಂತೀದೇವಿಯು—

'ತಾತು ಮಹಾತ್ಮ ನೀತು
ಭಾರತೀಯ ಭಾಗ್ಯಪುತ್ರ
ವೀರ್ಯದಿ ಅತ್ಯಂತ ವಿಚಿತ್ರ
ಜಗದಗಲ ಜ್ಯೋತಿ ಮಹಾಪಿತ'

ಎಂದು ತನ್ನ ಮುದ್ದುಮುದ್ದಾದ ಮುತ್ತಿನಂತಹ ಅಕ್ಷರಗಳಲ್ಲಿ ಮುದ್ರಿಸಿ ಕಣ್ಣುರುಗೆಸೆದಳು. ಅದನ್ನು ಕಂಡು ಚೀ, ಥೂ ಎಂದು ಕಂಬನಿದುಂಬಿ ಕಲಕಂಠದಿಂದ ದೇಶಭಕ್ತ ತರುಣ ಕವಿಯಾದ ತುಷಾರವರ್ಷನು—

'ಹಿಂದುಸ್ತಾನದ ಸ್ವಾತಂತ್ರ್ಯದ ಸಲುವಾಗಿ
ಅಕ್ಟೋಬರ
ಎರಡು ಹದಿನೆಂಟುನೂರಾ ಅರುವತ್ತೊಂಬ
ತ್ತಕ್ಕೆ
ಹುಟ್ಟಿದ್ದ ಕಂದನ ಕಂಡಿರಾ!
ಮಹಾತ್ಮಾವತಾರ!
ಪರತಂತ್ರ್ಯೋದ್ಧಾರದ ಜನಕ ನನ್ನ ಕುವರ!'

ಎನ್ನುತ್ತಲೇ- ಕರ್ಣಶೂಲ ರಾಗದಿಂದ 'ಹಾಹಾ ತಡೆ ತಡೆ' ಎಂದು ಅಧ್ಯಾತ್ಮ ವಿದ್ಯಾವಿಶಾರದನಾದ ಚಾಮರಾಜೇಂದ್ರ ಅಸ್ಪತ್ರೆಯ ೨ನೆಯ ಪುರುಷ ಸರಸ್ವತಿಯು— 'ಅದೇನು ಪರತಂತ್ರ್ಯೋದ್ಧಾರವದು? ಯಾವಾಗಲೂ ನೀನು ಸ್ಮರಿಸಲ್ಲರೂ ಪರತಂತ್ರರೇ ಆದರೂ ಆತ್ಮವು ಸ್ವತಂತ್ರವಿರುತ್ತದೆ. ಇಕೋ ಕೇಳು ನನ್ನ ಅಮರವಾಣಿಯನ್ನು—

ಆತ್ಮ ಸ್ವಾತಂತ್ರ್ಯವನು
ಸಾಧಿಸುವ ಮಂತ್ರವನು
ಬೋಧಿಸಿದ ನಿಜ ಗುರುವೆ।
ಪೋದೆಯಾ ಸತ್ಯಸಮರದಲಿ
ನಿನ್ನ ಮಹತ್ಸತ್ವ ಸಾಧನೆಯಲಿ॥

ಈ ಪ್ರಕಾರ ಮಹಾತ್ಮಾ ಗಾಂಧಿ ಹಿಂದುಸ್ತಾನಕ್ಕೆ ಆತ್ಮ ಸ್ವಾತಂತ್ರ್ಯ ಕೊಡಿಸಿದ್ದಾನೆ— ದೇಹ ಸ್ವಾತಂತ್ರ್ಯವನ್ನಲ್ಲ, ತಿಳಿಯಿತೆ? ಅವನ ಅಹಿಂಸೆ ಆತ್ಮದ ರಕ್ಷಣೆಗೆ ಸಾಧನವಲ್ಲದೆ ದೇಹದ ರಕ್ಷಣೆಗಲ್ಲ. ದೇಹಕ್ಕೆ ಗುಂಡಿಕ್ಕಿದವನು ಆತ್ಮಕ್ಕೆ ಗುಂಡಿಕ್ಕಿಲ್ಲ. ಆದುದರಿಂದ ಗಾಂಧಿ ಸಾಯಲಿಲ್ಲ. ಅಂದ ಮೇಲೆ ಕೊಂದವನಿಗೆ ಶಿಕ್ಷೆ ಇಲ್ಲ!'

ಎನ್ನುತ್ತಲೇ ಗಹಗಹಿಸುತ್ತ 'ಇದೆಂಥ ಕವನ! ಇದರಲ್ಲಿ ಶೋಕರಸವೇ ಇಲ್ಲ. ನನ್ನ 'ಬಾಪೂಜಿಗೆ ಭಾಷ್ಪಾಂಜಲಿ'ಯನ್ನು ಕೇಳು—

ನೂರಿಪ್ಪತ್ತೈದು ವರ್ಷ ಬಾಳ್ವೆನೆಂದೆ
ಓ ಗಾಂಧಿ ನಡುನೀರಿನಲಿ ಕೈಬಿಟ್ಟೆಯಿಂದೆ।
ನಿನ್ನ ಆಶ್ವಾಸನವೇನಾಯಿತು
ಆ ಕೂಸು ತಬ್ಬಲಿಯಾಯಿತು?॥

ಎಂದು ನೀರಾಂಬರಿಯಲ್ಲಿ ಹಾಡಿದೊಡನೆ

ನಾಲ್ಕಾಜನ ಉಪಶಿಕ್ಷಕ ಕವೀಶ್ವರರು ಚಟಕ್ಕನೆದ್ದು ಕ್ರಾಪು ಕೊಡಹಿ, 'ಇದೇನಿದು ಅಳುಬುರುಕತನ! ಗಾಂಧಿಯೊಬ್ಬ ವೀರ ಅವನನ್ನು—

ಸತ್ಯಾಹಿಂಸೆಯಬೀರಿ
ಪರತಂತ್ರವನು ದೂರಿ
ಸ್ವಾತಂತ್ರ್ಯ ಸಮರ ನೆಂದೆನಿಸಿದ ವೀರಾ,

ಎಂದು ಕೈದನಿದೆಗೆದು ಸ್ವಾತಂತ್ರ್ಯ ಸಮರನೆನಿಸಿದ ಗಾಂಧಿಯನ್ನು ವರ್ಣಿಸಬೇಕು; ಎಂದು ಸ್ನಿಗ್ಧಮಧುರ ವೃಷಭವಾಣಿಯಿಂದ ಹೂಂಕರಿಸಿದ್ದನ್ನು ಕೇಳಿ ತತ್ತರಿಸಿ ಸ್ಫೂರ್ತಿಪಡೆದ ಅಸಿ. ಮಾಸ್ತರನಾದ ಮತ್ತೊಬ್ಬ ವಾರ್ತಂ—

ಹಾಯ ಹಾಯ ಮಹಾತ್ಮಾ ಗಾಂಧಿಯೆ
ಭಾರತಾಂಬೆಯ ಪುತ್ರನೇ,
ಹಾಯ ಭಾರತ ನೇತ್ರ ಸೇರಿದೆ
ಪರಮಲೋಕ ಹುತಾತ್ಮನೇ!!,

ಎಂದುಹಾಡಿ 'ಏಕೋರಾಸಃ ಕರುಣಏವ' ಎಂದು ೨ ನೆಯ ಭವಭೂತಿ ಪಟ್ಟವನ್ನೇರಲು ಯತ್ನಿಸಿದ.

ಅಷ್ಟರಲ್ಲಿ ಇಷ್ಟರವರೆಗಿನ ಕವಿಗಳಿಗೆ ರಾಜಕಾರಣ ದೃಷ್ಟಿಯಿಲ್ಲವೆಂದು ಧಿಕ್ಕರಿಸಿ ಹಳೆಯಶೈಲಿಯನ್ನು ಹಳಿದು ಕಮ್ಯುನಿಸ್ಟ ಪ್ರಗತಿಶೀಲ ಕವಿಮಾರ್ತಾಂಡನು "ಗಾಂಧೀಜಿಯವರ ಕಂಬನಿ" ಯನ್ನು ತಾನು ಸುರಿಸುತ್ತಲೇ, ಕೆರಳಿದ ಸೋಶಾಲಿಸ್ಟ್ ಜನತಾ ಪ್ರಭುತ್ವವಾದಿಯೊರ್ವ ವಾರ್ತಂ "ಜೋಗಿ ರಾಗದಲ್ಲಿ ಖವಾಲಿ ತಾಳದಲ್ಲಿ"

"ಗಾಂಧೀಜಿಯ ಗಾಂಧೀಜಿಯ ಮಹಾಪದ
ಹೊಂದಿದ ಮಹಾತ್ಮಾಜಿಯ"

ಎಂದು ಸತ್ತವನ ಬಗ್ಗೆ ಶೋಕವನ್ನು ಹೊಸೆಲ್ವರಿಸಿದ!

ಇದು ಕವಿತ್ವವೇ ಅಲ್ಲವೆಂದು ಪಥವಾದಿ ಮಾರುತಿ ಭಕ್ತನಾದ ರ್ಯಾಡಿಕಲ್ ಕವಿಕಾಕೋಟಿಕನು.—

"ಏನ ಬಂತಪ್ಪ, ಹನಮಂತಪ್ಪ
ಕಾಪಾಡಪ್ಪಾ, ನೀ ನಮ್ಮಪ್ಪ"

ಎಂದು Mass Appeal- ಪಾಮರ ಹೃದಯವನ್ನು ಸ್ಪರ್ಶಿಸಿದನು.

'ಭಯವಿಲ್ಲ, ಭಕ್ತಿಯಿಲ್ಲ. ಶೋಕವಿಲ್ಲ, ಕಂಬನಿಯಿಲ್ಲ; ಎಂಥ ಹುಚ್ಚಾಟ!' ಎಂದು ಮೂದಲಿಸಿ, ಲಿಂಗನ್ನು ಬಿಟ್ಟುಬಂದ ಶೀಕ ಜುಡನ್ ಕವೀಂದ್ರನು "ಹಾ ಪ್ರಿಯಾ ಪ್ರಶಾಂತ ಹೃದಯಾ" ಎಂಬಂತೆ—

"ನಿಮಾಹನಿಯಾ, ಲೋಕದೊಡೆಯಾ ಕಣ್ಮರೆಯಾದೆಯಾ, ಮಹಾತ್ಮಾ" ಎಂದು ತನ್ನ ರೋತಿಸೂರತ್ವನ್ನು ಪ್ರದರ್ಶಿಸಿದನು.

"ಈ ಕವಿಗಳ ಕಾಟ ಸಾಕಾಯಿತು; ಕೇವಲ ಅಜ್ಞಾನಿಗಳು," ಎಂದು ಗಂಭೀರವಾಣಿಯಿಂದ ನುಡಿದು ಮಹಾಕವಿತ್ವ ಸಂಪಾದಕನಾದ, "ಕವಿವಾಣಿ" ಯೆಂಬ ಕವನಪತ್ರಿಕೆಯೊಂದನ್ನು ನಡೆಸುವ ಸನಾತನ ಧರ್ಮದ ಸಾಕಾರಬ್ರಹ್ಮನೆನಿಸಿದಜ್ಯೋತೀಂದ್ರ ಕವೀಶ್ವರರು ಅಧ್ಯಕ್ಷಪೀಠದಿಂದ ಪ್ರತಿಯೊಂದುಸಾಲೂ 'ಜ್ಯೋತಿ'ಯಿಂದ ಪ್ರಾರಂಭಿಸಲ್ಪಟ್ಟ ತಮ್ಮ ೨೧ ಸಾಲುಗಳ "ಜಗಜ್ಯೋತಿ" ಯೆಂಬ ಕವನವನ್ನು ಹೀಗೆ ಮುಗಿಸಿದರು:

ಜ್ಯೋತಿ ತತ್ತ್ವದಲ್ಲಿ ಒಂದು।
ಜ್ಯೋತಿ ತತ್ವಿಲ್ಲದಲ್ಲಿ ಭೇದ।
ಜ್ಯೋತಿಯಿಂದಲೆ ಜಯ ಹಿಂದ
ವಂದೇ ಮಾತರಂ॥

ಇದಾದೊಡನೆ ವಿಶ್ವ ಕುಟುಂಬಿಯಾದ ಅಭಿನವ ಸರ್ವಜ್ಞ ಕವೀಶ್ವರನು ಮಂಗಲವನ್ನು "ಬೆಳಗಿರಾರತಿಯಾ। ಗಾಂಧಿ ಮಹಾತ್ಮಗೆ। ಬೆಳಗಿರಾರತಿಯಾ।" ಎಂದು ಹಾಡುತ್ತಿರುವಾಗ ಒಮ್ಮಿಂದೊಮ್ಮೆ ಸಭಾಕಂಪವುಂಟಾಯಿತ.! ಏಕೆಂದರೆ ಕಟಿವೇರದನ್ನು ಬಾರಿಸುತ್ತ ಕಂ. ಗಂ. ಶಾಲೆಯ ೭ ನೇ ವರ್ಗದ ವಿದ್ಯಾರ್ಥಿಯಾದ ಜನಪದ ಸಾಹಿತಿ ಕಾಲಭೈರವನೊಬ್ಬನು —

"ಮಹಾತ್ಮಾ ಗಾಂಧೀಜಿಯ ಚರಿತ್ರವನಾ
ಹೇಳುವೆ ಕೇಳಿರಿ ಹಿರಿಯರೆ।
ಕೊಂದೊಯ್ದನು ಕಾಲನು ೫—೪೦ ಕ್ಕೆ
ನಶ್ವರ ದೇಹವನಾ॥

ಎಂದು ಕಲಿಯುಗದ ನಟರಾಜನಂತೆ ಧೀಂಕಿಟ್ಟು ಸಭೆಗೆ ನೆಗೆದಾಗ ಕವಿಕಾಲಕಾಲರ ಸಮಾಧಿ ಭಂಗವಾಯ್ತು. 'ಕೆಟ್ಟೋಡಿದರ್ ಕೆಲಕೆಲರ್ ಕಾಗದಂಗಳಂ। ಬಿಟ್ಟೋಡಿದರ್ ಕೆಲಕೆಲವರ್ ಸ್ವಾನ್ಯುಸೆನ್ಗಳಂ। ಪಟ್ಟಿದಟ್ಟಿಗಳ ಕೆಡೆದೋಡಿದರ್, ನೋಡಿದರ್ ಮುಂದಿ ಭೂಭೂಯೆನ್ನುತ!' ಒಟ್ಟು ಸಭೆ ಚೆದರಿತು—ದನ ದಿವಾಳಿಯಲ್ಲಿ ಚದರಿದಂತೆ! ನಾನು ಮುಂಗಾಣದೆ ನಡೆದಷ್ಟನ್ನೇ ವರದಿ ಪುಸ್ತಕದಲ್ಲಿ ರಿಕಾರ್ಡು ಮಾಡಿಕೊಂಡು ಪತ್ರಿಕಾಲಯವನ್ನು ಸೇರಬೇಕಾಯಿತು. ಕುರಿತೋದದೆಯೂ ಕಾವ್ಯ ಪ್ರಯೋಗ ಪರಿಣತಮತಿಗಳಾದ ನಮ್ಮ ಇಂದಿನ ಅಮರ ಕವಿಗಳು ಮುತ್ತು ಮಣಿಗಳನ್ನು ಕೋದಂತೆ, ಘೃತ ತೈಲಂಗಳ ಬೆರಸಿದಂತೆ ಕವನ ಹೆಣೆಯದೆ ಅಧುನಿಕವಾದ Prose ungrammatically written in zag zig lines makes Poetry-ವ್ಯಾಕರಣ ವಿರುದ್ಧ ಗದ್ಯವನ್ನು ಹಾವಿನಷ್ಟು ನೇರವಾಗಿ ಬರೆದು ನಿರಂಕುಶತೆಯನ್ನು ಪ್ರದರ್ಶಿಸಿ ಹಳೆಯ ಗಾದೆಯನ್ನು ಸಾರ್ಥಕ ಗೊಳಿಸಿ, ಹೊಸ ಬಗೆಗೆ ಮಾರ್ಗದರ್ಶನ ಮಾಡಿದ್ದಾರೆ. ಈ ಕವಿರತ್ನರ ಕಾವ್ಯ ರತ್ನಗಳನ್ನು ವಿಮರ್ಶಿಸುವವನಿಗೆ ರನ್ನ ಕೇಳಿದಂತೆ 'ಎಂಟೆದೆಯೆ?' ಎಂದು ಕೇಳುವುದರ ಬದಲು 'ಎಂಟೆಂಟಲಿ ಅರವತ್ತನಾಲ್ಕು ಎದೆಯೇ?' ಎಂದು ಕೇಳಬೇಕಲ್ಲವೆ? ಆದುದರಿಂದ ಅಲ್ಪಮತಿಯಾದ ನಾನು ಅಂಥ ಕಷ್ಟದ ಕಾರ್ಯಕ್ಕೆ ಕೈಹಾಕದೆ ಇದ್ದದ್ದನ್ನು ಇದ್ದಂತೆ ಇಟ್ಟುಬಿಟ್ಟಿದ್ದೇನೆ. ಗಾಂಧಿಯವರಿಗೆ ಈ ಕವಿಗಳು ಅಮರತ್ವ ಕೊಡಿಸಿದರೋ ಅಥವಾ ಇವರು ಯಾವದಾದರೂ ಒಂದು ...ತ್ವಕ್ಕೆ ಸೇರಿದರೋ ಎಂಬುದನ್ನು ಓದುಗರೇ ವಿಚಾರಿಸಲಿ.

\+ \+ \+

ದೇಖ ಮಿಯಾ ದೇಖ್।
ಬನ್ ಬನ್ ಮೆ ಬಂದರ್ಕಾ
ಖೇಲ ಚಲಾ ದೇಖ್!

---

* ಮೇಲಿನ ಸತ್ಯಾಭಾಸದ ವಿಡಂಬನವನ್ನು ಬಾಲ ಸಂಸ್ಕಾರದ ಕನ್ನಡ ಕವಿಗಳು ಕಣ್ಣು ತೆರೆವಂತೆ ಮಾಡುವುದರ ಸಲುವಾಗಿ ಇಲ್ಲಿ ಕೊಡಲಾಗಿದೆಯಲ್ಲದೆ ಇದರಲ್ಲಿ ಯಾರನ್ನೂ ವಿಮರ್ಶಿಸುವ ಉದ್ದೇಶವಿಲ್ಲ— ಸಂ.

KARMVEER 1-3-48

Reg.No. B. 5145

LICENCE No. 3
Licenced to Post without Prepayment




ಜ್ಯೋತಿಷಿ— ಕೃಷ್ಣಶಾಸ್ತ್ರಿ ಘಡೆ ಭವಿಷ್ಯ ಕಥನ ಆಫೀಸ ಖಡೇಬಜಾರ ಬೆಳಗಾವಿ.

## ಮಾರ್ಚ ೧ ರಿಂದ ೭ ರ ವರೆಗೆ

### ಮೇಷ

ನಿಮ್ಮ ಮತ್ತು ನಿಮ್ಮ ಹೆಂಡತಿಯ ಆರೋಗ್ಯದ ಬಗ್ಗೆ ಒಂದಿಲ್ಲೊಂದು ಬಗೆಯಿಂದ ತಳಮಳ ಇದ್ದೇ ಇದೆ. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಅಸಮಾಧಾನ. ಮಕ್ಕಳು ಇಬ್ಬರೊ ಪಣೆಯೂ ಬಹಳ ವಿರೋಧ ಮಾಡುವರು. ಸ್ಥಾವರದಲ್ಲಿ ಬಹಳ ಹಾನಿ. ಒಗ್ಗಲಾರದ ಮತ್ತು ಮನಸ್ಸಿಗೆ ಸರಿಯೆನಿಸದ ಕೆಲಸಗಳಲ್ಲಿ ಬಹಳ ವೆಚ್ಚ. ಕೆಲ ವಸ್ತುಗಳಿಗೆ ಧಕ್ಕೆ ಹತ್ತಿ ಬಹಳ ಹರಿಯುವದು ಮತ್ತು ಮುರಿಯುವದು. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಬಹಳ. ಆದರೆ ಪ್ರತಿಷ್ಠೆಗೆ ಬಹಳ ಕೊರತೆ ಬೀಳುವ ಪ್ರಸಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು ಇಲ್ಲವೆ ಹಾನಿ. ಆದರೆ ಶತ್ರುವೂ ಬಹಳ ಪೇಚಿನಲ್ಲಿ ಬೀಳುವ ಪ್ರಸಂಗ. ಪೂಜ್ಯ ಜನರ ಭೆಟ್ಟಿ ಮತ್ತು ಸಹವಾಸ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರ ವ್ಯವಹಾರ ಅನುಕೂಲ. ಅಶ್ವಿನಿಯ ಕೊನೆಯ ೨ ಮತ್ತು ಭರಣಿಯ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ. ತಾ, ೧-೪-೫ ಅನುಕೂಲ.

### ವೃಷಭ

ನಿಮ್ಮ ಮತ್ತು ಮಕ್ಕಳ ಪ್ರಕೃತಿ ಅನುಕೂಲ. ಆದರೆ ಹೆಂಡತಿಯದು ಕೆಲ ಕಾರಣಗಳಿಂದ ದೊಡ್ಡ ಮನಃಕ್ಷೋಭವಾಗುವಂತೆ ಮನೆಯಲ್ಲಿ ಅಸ್ವಸ್ಥತೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭವೂ ಉತ್ತಮ. ಆದರೆ ಬೆಳೆಯುತ್ತಿರುವ ಪ್ರತಿಷ್ಠೆಯ ಮೇಲೆ ಬಹಳ ದೊಡ್ಡ ಆಘಾತ. ಸ್ಥಾವರದಲ್ಲಿ ಸ್ವಲ್ಪ ಹೆಚ್ಚಳ. ಆಕಲ್ಪಿತ ಲಾಭದ ಸಂಭವ. ಬಂಧು ವರ್ಗದವರಲ್ಲಿ ಒಬ್ಬರಿಗೆ ಘಾತಪಾತವಾಗುವ ಅಂಜಿಕೆ. ವಾದದಲ್ಲ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಕೃತ್ತಿಕೆಯ ಕೊನೆಯ ೨ ಮತ್ತು ರೋಹಿಣಿಯ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ. ತಾ. ೨—೩—೬ ಅನುಕೂಲ.

### ಮಿಥುನ

ಪ್ರಕೃತಿಗೆ ಕ್ಲೇಶ. ಸ್ತ್ರೀ ಸುಖ ಅನುಕೂಲ. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಬೆಳೆಯುತ್ತಲೆ ನಡೆಯುವದು. ಬಂಧು ವರ್ಗದವರಲ್ಲಿ ಕೆಲ ಅನುಕೂಲ ಘಟನೆಗಳು. ಉದ್ಯೋಗದಲ್ಲಿ ಪ್ರತಿಷ್ಠೆ ಮತ್ತು ಲೌಕಿಕ ಉತ್ತಮ. ಆದರೆ ಪ್ರಗತಿ ಮತ್ತು ಲಾಭದಲ್ಲಿ ಕಡಿತ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಆದರೆ ಶತ್ರುವೂ ಹೆಚ್ಚು ಜೋರಿನಲ್ಲಿ. ಪ್ರವಾಸ ಮತ್ತು ಪತ್ರ ವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಆರಿದ್ರೆಯ ಕೊನೆಯ ೨ ಮತ್ತು ಪುನರ್ವಸುವಿನ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ, ತಾ. ೧-೪-೫ ಅನುಕೂಲ.

### ಕರ್ಕ

ಪ್ರಕೃತಿ ಮತ್ತು ಸ್ತ್ರೀ ಸುಖದಲ್ಲಿ ಬಹಳ ಕೆಡಕು. ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಬಹಳ ಅಸಮಾಧಾನದ್ದು. ಉದ್ಯೋಗದಲ್ಲಿ ಪ್ರತಿಷ್ಠೆ ಕಡಿಮೆ. ಆದರೆ ಲಾಭ ಮತ್ತು ಪ್ರಗತಿ ಉತ್ತಮ. ವಿಶೇಷವಾಗಿ ನೋಕರಿ ಮಾಡುವವರಿಗೆ ಹೆಚ್ಚು ಪ್ರಗತಿಪರ. ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಪುಷ್ಯದ ಕೊನೆಯ ೨ ಮತ್ತು ಆಶ್ಲೇಷಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ. ತಾ. ೨-೩-೭ ಅನುಕೂಲ.

### ಸಿಂಹ

ನಿಮ್ಮ ಮತ್ತು ಮಕ್ಕಳ ಪ್ರಕೃತಿ ಅನುಕೂಲ. ಆದರೆ ಹೆಂಡತಿಗೆ ರೋಗ ಇಲ್ಲವೆ ಅಪಘಾತದಿಂದ ಕ್ಲೇಶ. ಉದ್ಯೋಗದಲ್ಲಿ ಎಲ್ಲ ಕಡೆಯಿಂದಲೂ ಭಾರವಾದ ವೆಚ್ಚ. ಕಿರುಕುಳ ವೈರಿ. ಮತ್ತು ಹಾನಿ ಹೊಂದುವ ಪ್ರಸಂಗ. ಸ್ತ್ರೀ ವರ್ಗದವರಲ್ಲಿ ನಿಮ್ಮ ನೀತಿಮತ್ತೆಯ ಬಗ್ಗೆ ಸಂಶಯ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು. ಮತ್ತು ಶತ್ರುಗಳಿಂದ ಬಗೆ ಬಗೆಯ ಛಲನೆ. ಬಂಧು ವರ್ಗದವರಗೂಡ ವಿರೋಧ. ಮಿತ್ರರ ವರ್ತನೆ ಶತ್ರುಗಳಂತೆಯೆ. ಪ್ರವಾಸದ ಕೆಲಸ ಕಠಿಣ. ಆದರೆ ಮಘಾದ ಕೊನೆಯ ೨ ಮತ್ತು ಪೂರ್ವಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ. ತಾ. ೪—೫ ಅನುಕೂಲ.

### ಕನ್ಯಾ

ಪ್ರಕೃತಿ ಮತ್ತು ಸ್ತ್ರೀ ಸುಖ ಅನುಕೂಲ. ಆದರೆ ಮಕ್ಕಳು ಮನಸ್ಸಿಗೆ ಸರಿಬಾರದಂಥ ಕೆಲಸಗಳನ್ನು ಮಾಡುವರು. ಮತ್ತು ಅದರಲ್ಲಿಯೆ ಅಪ್ರಿಯ ಅತಿಥಿಗಳೂ ಹೆಚ್ಚಾಗಿ ಬರುವರು. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಪ್ರತಿಷ್ಠೆ ಸ್ವಲ್ಪ ಥಳಮಳಿಸುವದು. ಆದರೆ ಲಾಭಕ್ಕಿಂತ ಹಾನಿಯದೆ ಹೆಚ್ಚು ಅಂಜಿಕೆ. ಮಿತ್ರತ್ವದಲ್ಲಿ ವಿರೋಧ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಪೊಳ್ಳು ಯಶಸ್ಸು. ಮನರಂಜನೆಯ ಪ್ರಸಂಗದಲ್ಲಿ ಅಕಲ್ಪಿತ ಮನೋಭಂಗ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರ ವ್ಯವಹಾರ ಅನುಕೂಲ. ಉತ್ತರೆಯ ಕೊನೆಯ ೨ ಮತ್ತು ಹಸ್ತಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ. ತಾ. ೨—೩—೭ ಅನುಕೂಲ.

### ತುಲಾ

ಪ್ರಕೃತಿ ಕೆಡುವದು. ಹೆಂಡತಿಗೆ ಬಗೆ ಬಗೆಯಾಗಿ ತೊಂದರೆ ಮತ್ತು ಸಂತಾಪದ ಪ್ರಸಂಗ. ಉದ್ಯೋಗದಲ್ಲಿ ಪ್ರಗತಿ ಕಡಿಮೆ. ಪ್ರತಿಷ್ಠೆಯೂ ಕುಂದುವದು. ಆದರೆ ಲಾಭ ಅನುಕೂಲ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸ್ವಲ್ಪ ಅನುಕೂಲತೆ. ಆದರೆ ಅವಮಾನದಿಂದ ವೆಚ್ಚ ಮತ್ತು ತೊಂದರೆ ಬಹಳ. ಸ್ತ್ರೀಯರಲ್ಲಿ ಅನಾದರ. ಮಿತ್ರ ಸುಖ ಅನುಕೂಲ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರ ವ್ಯವಹಾರ ಅನುಕೂಲ ಸ್ವಾತಿಯ ಕೊನೆಯ ೨ ಮತ್ತು ವಿಶಾಖಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ.

### ವೃಶ್ಚಿಕ

ಪ್ರಕೃತಿಗೆ ಅಪಘಾತದ ಅಂಜಿಕೆ. ಹೆಂಡತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಆಪ್ತರಲ್ಲಿ ಪ್ರಿಯ ಜನರ ವಿಯೋಗದ ಸಂಭವ. ಉದ್ಯೋಗದಲ್ಲಿ ಪ್ರಗತಿ ಕಡಿಮೆ. ಆದರೆ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಸ್ಥಾವರ ಜಂಗಮ ಸಂಗ್ರಹದಲ್ಲಿ ಸ್ವಲ್ಪ ಹೆಚ್ಚಳ. ಒಳ್ಳೆಳ್ಳೆ ವಿಚಾರದಲ್ಲಿ ಮನಸ್ಸು ನಿಮಗ್ನವಾಗುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅಪೂರ್ವ ಯಶಸ್ಸು. ಮಿತ್ರಸುಖ ಉತ್ತಮ ಮಕ್ಕಳಲ್ಲಿ ಉನ್ನತಿ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರ ವ್ಯವಹಾರ ಹೆಚ್ಚು ಅನುಕೂಲ. ಅನುರಾಧೆಯ ಕೊನೆಯ ೨ ಮತ್ತು ಜೇಷ್ಠದ ಮೊದಲನೆ ೨ ಚರಣಗಳಿಗೆ ಹೆಚ್ಚು ಅನುಕೂಲ. ೪—೫—೬—೭ ಅನುಕೂಲ.

### ಧನು

ನಿಮ್ಮ ಮತ್ತು ಹೆಂಡತಿಯ ಆರೋಗ್ಯ ಅನುಕೂಲ. ಆದರೆ ಮಕ್ಕಳಿಗೆ ಬಹಳ ಕ್ಲೇಶ. ಪ್ರಾಪಂಚಿಕ ವಿಷಯಗಳಲ್ಲಿ ಕೆಲವು ಬಹಳ ಅನುಕೂಲವಾಗಿದ್ದರೆ ಬೇರೆ ಕೆಲವು ಅಷ್ಟೆ ತೊಂದರೆಯವು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅತಿ ಉತ್ತಮ. ಆದರೆ ನಿರರ್ಥಕ ವೆಚ್ಚದ ಪ್ರಸಂಗವೂ ಬಹಳ. ಸಂಗ್ರಹದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲ. ಮಿತ್ರರು ಪ್ರತಿಕೂಲ ಸಲಹೆ ಕೊಡುವ ಸಂಭವ. ವಾಹನದ ಇಲ್ಲವೆ ದನಕರುಗಳ ಹೊಸ ಖರೀದಿ. ಪ್ರವಾಸಾದಿ ಕೆಲಸ ಸುಖಕರ. ಮೂಲಾದ ಕೊನೆಯ ೨ ಮತ್ತು ಪೂರ್ವಾಷಾಢಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಿಮೆ. ತಾ ೧.೪—೫—೬ ಅನುಕೂಲ.

### ಮಕರ

ಪ್ರಕೃತಿ ಉತ್ತಮ ಆದರೆ ಹೆಂಡತಿಗೆ ಒಮ್ಮೆಲೆ ಕಾಯಿಲೆ ಇಲ್ಲವೆ ಅಪಘಾತದ ಅಂಜಿಕೆ. ಪ್ರಾಪಂಚಿಕ ಸುಖ ಸಾಧಾರಣ. ಆದರೆ ಮಕ್ಕಳಲ್ಲಿ ಒಬ್ಬರಿಗೆ ಒಳ್ಳೆ ಉನ್ನತಿ. ಉದ್ಯೋಗದಲ್ಲಿ ಅನುಕೂಲ ಪ್ರಗತಿ ಆದರೆ ಲಾಭಮಾತ್ರ ಕಡಿಮೆ. ಪ್ರತಿಷ್ಠೆಗೂ ಸ್ವಲ್ಪ ಕುಂದುಂಟಾಗುವ ಅಂಜಿಕೆ. ಸ್ಥಾವರದಲ್ಲಿ ಹಾನಿ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯಪಕ್ಷಗಳಲ್ಲಿ ಸಮಾನ ಸ್ಥಿತಿ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ ಉತ್ತರಾಷಾಢದ ಕೊನೆಯ ೨ ಮತ್ತು ಶ್ರವಣದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ ತಾ ೨-೩-೭ ಅನುಕೂಲ.

### ಕುಂಭ

ಪ್ರಕೃತಿಗೆ ರೋಗ ಇಲ್ಲವೆ ಅಪಘಾತದ ಕ್ಲೇಶ ಸ್ತ್ರೀಸುಖ ಅನುಕೂಲ ಮಕ್ಕಳಲ್ಲಿ ಒಬ್ಬರಿಗೆ ಉತ್ಕರ್ಷವಾದರೆ ಮತ್ತೊಬ್ಬರಿಗೆ ಅಪಕರ್ಷ ಆದ್ದರಿಂದ ಮನಸು ಸುಖದುಃಖಗಳ ಸೆಳೆತದಲ್ಲಿ ಸಿಕ್ಕುವದು. ಉದ್ಯೋಗದಲ್ಲಿ ಲಾಭ ಅನುಕೂಲ. ಆದರೆ ಪ್ರಗತಿ ಮತ್ತು ಪ್ರತಿಷ್ಠೆ ಕಾಯಂ ಇಡುವದಕ್ಕಾಗಿ ಬಹಳ ಶ್ರಮ ಮತ್ತು ಅನೇಕ ಜನರ ಲಾಂಗೂಲ ಚಾಲನ ಮಾಡಬೇಕಾದ ಪ್ರಸಂಗ. ಬಂಧುವರ್ಗದಲ್ಲಿ ವಿರೋಧ ಧರ್ಮಕೃತ್ಯದಲ್ಲಿ ಅಡಚಣಿಗಳು ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳದು ಬಹಳ ಆದರೆ ನಿಮ್ಮದೂ ಸ್ವಲ್ಪ ಹಾನಿ. ಮಿತ್ರ ಸುಖ ಉತ್ತಮ. ಭೆಟ್ಟಿ ಮತ್ತು ಪತ್ರವ್ಯವಹಾರಕ್ಕಿಂತ ಪ್ರವಾಸ ಅನುಕೂಲ ಶತತಾರಿಕೆಯ ಕೊನೆಯ ಮತ್ತು ಪೂರ್ವ ಭಾದ್ರಪದದ ಮೊದಲನೆ ಚರಣಗಳಿಗೆ ತೊಂದರೆ ಕಡಮೆ. ತಾ ೨—೩—೪—೫ ಅನುಕೂಲ.

### ಮೀನ

ಪ್ರಕೃತಿ ಮತ್ತು ಸ್ತ್ರೀಸುಖ ಅನುಕೂಲ ಆದರೆ ಮಕ್ಕಳಿಗೆ ಸ್ವಲ್ಪ ಕಾಯಿಲೆ ಉದ್ಯೋಗದಲ್ಲಿ ಪ್ರತಿಷ್ಠೆ ಉತ್ತಮ ಆದರೆ ಪ್ರಗತಿ ಮತ್ತು ಲಾಭದಲ್ಲಿ ಆಕಸ್ಮಿಕ ಅಡಚಣಿಗಳು. ಮಿತ್ರತ್ವದಲ್ಲಿ ವಿರೋಧ ಎರಡನೆಯವರಿಗೆ ಕೈಬಿಡ್ಡುವ ಪ್ರಸಂಗ ಬರುವಂತೆ ವೆಚ್ಚ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಆದರೆ ಶತ್ರುಗಳ ಜೋರು ಹೆಚ್ಚು. ಸ್ವಲ್ಪ ಅವಚಿತ ಲಾಭ ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ ಉತ್ತರಾ ಭಾದ್ರಪದದ ಕೊನೆಯ ೨ ಮತ್ತು ರೇವತಿಯ ಮೊದಲನೆಯ ೨ ಚರಣಗಳಿಗೆ ತೊಂದರೆ ಕಡಿಮೆ. ತಾ. ೨-೩-೪-೫ ಅನುಕೂಲ.

## ಸಂಯುಕ್ತ ರಾಷ್ಟ್ರ ಸಂಘಕ್ಕೆ ಅವಸಾನ ಸಮೀಪಿಸಿತೆ ?

[ ಮೊದಲನೆಯ ಪುಟದಿಂದ ]

ರಾಷ್ಟ್ರೀಯ ಸರಕಾರವೊಂದು ಅಂತರ್ರಾಷ್ಟ್ರೀಯ ಸಂಸ್ಥೆಗೆ ಪ್ರತಿನಿಧಿಯನ್ನು ನಾಮಕರಣ ಮಾಡಿ ಕಳುಹುವ ಪದ್ಧತಿಯನ್ನು ನಿಲ್ಲಿಸಿ ಆಯಾ ಯ ಕಾಣಗಳಿಂದ ಪ್ರಜೆಗಳೇ ನೇರವಾಗಿ ನಾಟನ್ನು ಅಂತರ್ರಾಷ್ಟ್ರೀಯ ಸಂಸ್ಥೆಯಲ್ಲಿ ಪ್ರತಿನಿಧಿಸಲು ಕಳುಹಬೇಕೆಂಬುದು ಶ್ರೀ ಮೂರರ ಒಂದು ಮುದ್ದೆ. ಇದನ್ನು ಕೂಡ ಜನರ ಪ್ರಾತಿನಿಧಿಕವೆನಿಸುವ ಗ್ರಾಹಕ ಸಂಘಗಳಿಂದಲೇ ನಿರ್ವಹಿಸುವ ವ್ಯವಸ್ಥೆಯನ್ನು ಮಾಡಬಹುದು. ಹೀಗೆ ಗ್ರಾಹಕಸ್ಥೆಯನ್ನು ಮತ್ತು ನಾಗರಿಕತ್ವಗಳಿಂದ ಸಾಮಾನ್ಯ ಪ್ರಜೆಯು ಅಂತರ್ರಾಷ್ಟ್ರೀಯ ಸಂಸ್ಥೆಯೊಂದರ ಮೂಲಕ ಜಾಗತಿಕ ಶಾಂತಿಯನ್ನು ಕಾಪಾಡಲು, ಸರ್ವ ಹಿತವನ್ನು ಸಾಧಿಸಲು ಸಮರ್ಥನಾಗುತ್ತಾನೆಂಬುದೇ ಭಾಷಣಕಾರ ಮೂಲಸೂತ್ರದಿಂದ ಹೊರಡುವ ನಿಗಮನ.



ಈ ಪತ್ರಿಕೆಯು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ಲೋಕಶಿಕ್ಷಣ ಟ್ರಸ್ಟದ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತವಾಗಿ ಪ್ರಕಟಿಸಲಾಯಿತು.